# THE BOOK WAS DRENCHED

# ವಸಂತಮಿತ್ರವಿಜಯ ನಾಟಕಂ.

ಮೈಸೂರಿನಲ್ಲಿರುವ

ಆನವಟ್ಟಿ ರಾಮರಾಯರಿಂದ

ನೂತನವಾಗಿ ರಚಿಸಲ್ಪಟ್ಟುದು.



1906.

THE STANDARD PRESS.

BANGALORE

Price 8 Ans.

TO

**Naib V. Narain Rao Esquire**

THIS LITTLE WORK

IS DEDICATED

IN TOKEN OF GRATITUDE

AND

ADMIRATION OF

HIS HIGH IDEALS AND

PUBLIC SPIRITEDNESS.

# ವಿಜ್ಞಾಪನೆ.

—o—

ನಾಟಕಶಾಲೆಯು ರಾಜ್ಯಕ್ಕೆ ವಿದ್ಯಾಶಾಲೆಗೆ ಸಮಾನವಾದದ್ದಾಗಿದೆ. ಇದರಮೂಲಕ ಜನರಿಗೆ ನಾಗರಿಕತೆ, ತಿಳಿವಳಿಕೆಗಳನ್ನು ಬೋಧಿಸುವುದು ಅತ್ಯಂತಸುಲಭವಾಗಿರುವುದಲ್ಲದೆ ಜನರಿಗೆ ವಿನೋದವಾಗಿಯೂ ಇರುವುದು. ಆದರೆ ಈ ಕಾಲಕ್ಕೆ ಅನುಗುಣವಾದ ಒಂದು ನಾಟಕವನ್ನು ಬರೆಯಬೇಕೆಂದು ನನಗೆ ತೋರಿದುದರಿಂದ, ಅನುಭವಸಿದ್ಧವಾಗಿರುವುದನ್ನೂ, ಸ್ವಭಾವವನ್ನೂ ಮೀರದೆ ಈ ಕಾಲದಲ್ಲಿ ನಡೆಯುತ್ತಿರುವ ಮನುಷ್ಯರಗುಣ, ಸ್ವಭಾವ, ನಡವಳಿಕೆ ಮುಂತಾದ ವಿಷಯಗಳನ್ನೂ, ಹೆಂಗಸರೇ ಪ್ರಜಾಭಿವೃದ್ಧಿಗೆ ಕಾರಣರಾಗಿರುವುದರಿಂದ ಇವರಿಂದಲೇ ಪ್ರಪಂಚಕ್ಕೆ ಹಾನಿ ವೃದ್ಧಿಯುಂಟಾಗುವುದೆಂಬುವದನ್ನೂ ನಾಟಕದ ಪಾತ್ರಗಳ ಮುಖೇಣ ವಿಷಯಗಳನ್ನು ಸ್ಪಷ್ಟವಾಗಿ ತೋರಪಡಿಸಿದ್ದೇನೆ.

ಈ ಗ್ರಂಥದಲ್ಲಿ ಕೆಲವುವಿಷಯಗಳನ್ನು ಇನ್ನೂ ಹೆಚ್ಚಾಗಿ ಸೇರಿಸಬೇಕಾಗಿರುವುದೆಂದು ತೋರಿಬಂತು. ಆದರೆ ಸಮಯವು ಸರಿಬೀಳಲಿಲ್ಲವಾದುದರಿಂದ ಎರಡನೆಯ ಮುದ್ರಣದವರಿಗೂ ನಿರೀಕ್ಷಣೆ ಮಾಡಬೇಕಾಯಿತು. ಈ ಗ್ರಂಥದಲ್ಲಿ ಅಲ್ಲಲ್ಲಿ ಪ್ರಮಾದವು ಬಿದ್ದಿರಬಹುದು. ಮಹನೀಯರು ಅಂತಹ ತಪ್ಪುಗಳನ್ನು ನನಗೆ ತಿಳಿಸಿದುದಾದರೆ ಕೃತಜ್ಞತೆಯಿಂದ ಸ್ವೀಕರಿಸಿ ಎರಡನೆಯ ಮುದ್ರಣದಲ್ಲಿ ಸರಿಮಾಡಿಕೊಳ್ಳುವೆನು.

ಈ ಗ್ರಂಥವನ್ನು ಮುದ್ರಣಮಾಡಿಸುವುದಕ್ಕಾಗಿ ಮೈಸೂರಲ್ಲಿರುವ ಮ. ನಾಯಬ ವಿ. ನಾರಾಯಣರಾಯರವರುವಿಶೇಷವಾಗಿ ಧನಸಹಾಯಮಾಡಿರುವುದರಿಂದ ಇವರ ಸಹಾಯಕ್ಕೆ ನಾನುಎಷ್ಟು ಕೃತಜ್ಞನಾಗಿದ್ದರೂ ಸಾಲದು ಈ ಮಹನೀಯರು ತೋರಿಸಿರುವ ಉದಾರಗುಣವನ್ನು ಇತರರು ಮೇಲುಪಜ್ಞೆಯಾಗಿಟ್ಟುಕೊಂಡು ಗ್ರಂಥಕರ್ತರಿಗೆ ಆಶ್ರಯವನ್ನು ಕೊಡುತ್ತಾ ಬರುತ್ತಾರೆಂದು ನಂಬಿರುತ್ತೇನೆ.

ಈ ನಾಟಕವನ್ನು ಅಭಿನಯಿಸುವದಕ್ಕೂ ಅನುಕೂಲಿಸುವಂತೆ ಸರಿಯಾದ ಕಾಲದಲ್ಲಿ ಯಾವನ್ಯೂನತೆಯೂ ತೋರ್ಪಡದಂತೆ ಪಾತ್ರವರ್ಗಗಳನ್ನು ಕ್ರಮಪಡಿಸಿರುವುದರಿಂದ, ಈ ನಾಟಕವನ್ನು ಆಡಲು ಅಪೇಕ್ಷಿಸುವ ಯಾವ ನಾಟಕದ ಕಂಪೆನಿಯವರಾದರೂ ಈ ಗ್ರಂಥಕರ್ತರ ಅನುಮತಿಯನ್ನು ಮೊದಲು ಪಡೆದು ಆಡಬೇಕು. ಹಾಗಿಲ್ಲದಿದ್ದರೆ ಅವರಲುಕ್ಸಾನಿಗೆ ಬಾಧ್ಯರಾಗಬೇಕಾಗುತ್ತೆ.

ಮೈಸೂರು. ೧-೩-೧೯೦೬.

ಆನವಟ್ಟಿ ರಾಮರಾಯ.

# ನಾಟಕದ ಪಾತ್ರಗಳು.

| | | |
|---|---|---|
| ೧ | ಸೌಗಂಧಿಕ. | ರತ್ನಪುರೀ ದೇಶದ ಮಹಾರಾಜ. |
| ೨ | ವಸಂತಮಿತ್ರ. | ಸೌಗಂಧಿಕನಮಂತ್ರಿ (ಕಥಾನಾಯಕ.) |
| ೩ | ಚಾರುಶೀಲೆ. | ವೇಶ್ಯಾಂಗನೆ. |
| ೪ | ಅನಸೂಯೆ. | ಚಾರುಶೀಲೆಯ ಚೇಟಿಯರು. |
| ೫ | ಹಂಸಗಮನೆ. | ಚಾರುಶೀಲೆಯ ಚೇಟಿಯರು. |
| ೬ | ಮಾಂಡವ. | ಋಷಿ. |
| ೭ | ಗಾಲವ. | ಮಾಂಡವನ ಶಿಷ್ಯ. |
| ೮ | ಸೇವಕ. | ಅಮೃತಶೇಖರೀ ಪಟ್ಟಣದ ದ್ವಾರಪಾಲಕ. |
| ೯ | ಕುಂಟ–ಸತ್ಯಶೀಲ. | ಒಬ್ಬ ರಾಜಪುತ್ರನು ಆನಂದವತಿಯನ್ನು ಮದುವೆಮಾಡಿಕೊಳ್ಳಬೇಕೆಂದು ಅಕೆಯು ಹೇಳಿದಂತೆ ಕುಂಟನ ವೇಷವನ್ನು ತಾಳಿ ಕುಟೀರದಲ್ಲಿರುವವನು. |
| ೧೦ | ರಾಜಹಂಸ. | ಅಮೃತಶೇಖರೀಪಟ್ಟಣದ ಮಹಾರಾಜ. |
| ೧೧ | ಆನಂದವತಿ. | ರಾಜಹಂಸನ ಮಗಳು. |
| ೧೨ | ಸುನೀತಿ. | ರಾಜಹಂಸನ ಮಂತ್ರಿ. |
| ೧೩ | ಸತ್ಯನಿಧಿ. | ಮಹಾರಾಜ. |
| ೧೪ | ಕುಶಲಮತಿ. | ಸತ್ಯನಿಧಿರಾಜನ ಮಂತ್ರಿ. |
| ೧೫ | ಶುಭಾಂಗಿ. | ಸತ್ಯನಿಧಿರಾಜನ ಮಗಳು.—(ಕಥಾನಾಯಕಿ) |
| ೧೬ | ಚಂಪಕಮಾಲಿನಿ. | ಶುಭಾಂಗಿಯ ಚೇಟಿ. |
| ೧೭ | ಸ್ನೇಹಿತ. | ಸತ್ಯನಿಧಿಯ ಮಿತ್ರ. |
| ೧೮ | ಕರ್ಪೂರಮಂಜರಿ. | ಸತ್ಯನಿಧಿಯ ಬಾಂಧವರು. |
| ೧೯ | ಕಲವಾಣಿ. | ಸತ್ಯನಿಧಿಯ ಬಾಂಧವರು. |

೩ ಜನ ಬ್ರಾಹ್ಮಣರು, ೨ ಕಟುಕರು, ಕಾಳಿ.

# ಉಪೋದ್ಘಾತವು.

ಪ್ರಬಂಧವು ಶ್ರಾವ್ಯವೆಂದೂ, ದೃಶ್ಯವೆಂದೂ ಎರಡು ವಿಧವಾಗಿದೆ. ಕಾವ್ಯ, ಚಂಪೂಭೇದದಿಂದ ಶ್ರಾವ್ಯವು ಎರಡುವಿಧವು. ನಾಟಕ, ಪ್ರಕರಣ, ಬಾಣ, ಪ್ರಹಸನ, ಡಿಮ, ವ್ಯಾಯೋಗ ಮುಂತಾದ ಭೇದಗಳಿಂದ ದೃಶ್ಯಪ್ರಬಂಧವು ಹತ್ತುವಿಧವಾಗಿದೆ. ಈ ಹತ್ತುಬಗೆಗೂ ರೂಪಕವೆಂದು ಹೆಸರು. ಅವುಗಳೊಳಗೆ ಈ ವಸಂತಮಿತ್ರವಿಜಯವೆಂಬ ಗ್ರಂಥವು ಕಲ್ಪಿತಕಥೆಯುಳ್ಳದ್ದಾಗಿಯೂ, ಮಂತ್ರಿಯೇನಾಯಕನಾಗಿ ಉಳ್ಳದಾಗಿಯೂ ಲೋಕವ್ಯಾಪಾರಗಳಿಗಾಶ್ರಯವಾಗಿಯೂ ಇರುವುದರಿಂದ ಲಕ್ಷಣಶಾಸ್ತ್ರದಪ್ರಕಾರ ಇದನ್ನು ಪ್ರಕರಣವೆಂದು ಹೇಳಬಹುದು.

ಕನ್ನಡಭಾಷೆಯಲ್ಲಿ ವಸ್ತುಕ ವರ್ಣಕವೆಂಬ ಗ್ರಂಥಗಳೇ ಪ್ರಚಾರವಾಗಿವೆಯಲ್ಲದೆ ನಾಟಕಾದಿಗಳೇ ಇಲ್ಲ. ಆದರೆ ಸುಮಾರು ೨೫೦ ವರುಷಗಳ ಹಿಂದೆ ಮೈಸೂರುದೇಶವನ್ನಾಳುತ್ತಿದ್ದ ಚಿಕ್ಕದೇವರಾಜವಡೆಯರಲ್ಲಿ ಆಸ್ಥಾನಕವಿಗಳಾಗಿದ್ದ ಸಿಂಗರಾರ್ಯರು ರತ್ನಾವಳಿಯೆಂಬ ಸಂಸ್ಕೃತ ನಾಟಕವನ್ನು ಮಿತ್ರವಿಂದಾ ಗೋವಿಂದೀಯವೆಂಬ ಹೆಸರಿನಿಂದ ಹಳೆಗನ್ನಡಭಾಷೆಯಲ್ಲಿ ತಿರುಗಿಸಿದರು. ಇದು ಹೊರತು ಯಾರೂ ನಾಟಕಾದಿಗಳನ್ನು ಕನ್ನಡದಲ್ಲಿ ಮಾಡಿರಲಿಲ್ಲ. ೧೮೮೦ನೆ ಇಸವಿಯಲ್ಲಿ ಮೈಸೂರು ಮಹಾರಾಜ ಶ್ರೀ ಚಾಮರಾಜೇಂದ್ರವಡೆಯರ ಕಾಲದಲ್ಲಿ ಆಸ್ಥಾನಕವಿಗಳಾಗಿದ್ದ ವೀರಶೈವಮತಸ್ಥನಾದ ಬಸಪ್ಪಶಾಸ್ತ್ರಿಗಳು ಮೊದಲು ಕಾಳಿದಾಸಕೃತ ಶಾಕುಂತಲನಾಟಕವನ್ನು ಆ ರಾಜರ ಪ್ರೋತ್ಸಾಹದಿಂದ ಕನ್ನಡದಲ್ಲಿ ಮಾಡಿ, ಆನಂತರ ಉತ್ತರರಾಮಚರಿತ, ಚಂಡಕೌಶಿಕ, ರತ್ನಾವಳಿ ಎಂಬ ನಾಟಕಗಳನ್ನು ಕನ್ನಡದಲ್ಲಿ ಮಾಡಿದರು. ಅವರ ಮೇಲ್ಪಂಕ್ತಿಯನ್ನು ಹಿಡಿದು ಕನ್ನಡ ಪಂಡಿತರಾದ ಮ॥ ಸೂರ್ಯನಾರಾಯಣಶಾಸ್ತ್ರಿಗಳು, ಮ॥ ಅಯ್ಯಾಶಾಸ್ತ್ರಿಗಳೂ, ಮ॥ ಶೀತಾರಾಮಶಾಸ್ತ್ರಿಗಳು ಮುಂತಾದವರು ನಾಗಾನಂದ, ವಿಕ್ರಮೋರ್ವಶೀಯ, ಪಾರ್ವತೀಪರಿಣಯ ಮುಂತಾದ ಸಂಸ್ಕೃತನಾಟಕಗಳನ್ನು ಕನ್ನಡಭಾಷೆಗೆ ತಿರುಗಿಸಿದರು. ಇನ್ನು ಕೆಲವರು ವಸುಚರಿತ್ರ, ಮನುಚರಿತ್ರೆ ಎಂಬ ಆಂಧ್ರಗ್ರಂಥಗಳ ಕಥೆಯನ್ನು ಆಧಾರವಾಗಿಟ್ಟುಕೊಂಡು ನಾಟಕದಂತೆ ಕನ್ನಡದಲ್ಲಿ ರಚಿಸಿದರು.

ಇದುವರೆಗೆ ಹುಟ್ಟಿರುವ ನಾಟಕಗಳೆಲ್ಲಾ ಪ್ರಾಯಶಃ ಬೇರೆಬೇರೆ ಭಾಷೆಯಲ್ಲಿದ್ದ ನಾಟಕಗಳಿಂದ ಕನ್ನಡಕ್ಕೆ ತಿರುಗಿಸಿದವುಗಳಾಗಿಯೇ ಇವೆ. ನಾಟಕಾದಿ ರೂಪಗಳು ರಸಭಾವಗಳನ್ನು ಪ್ರತ್ಯಕ್ಷವಾಗಿ ತೋರಿಸಿ, ಸಭಿಕರನ್ನು ರಂಜನೆಗೊಳಿಸಬೇಕೆಂಬ ಉದ್ದೇಶದಿಂದಲೇ ಹುಟ್ಟಿದವುಗಳಾಗಿವೆ. ಇವುಗಳನ್ನು ನೋಡಿದವರಿಗೆ ರಸಸ್ವರೂಪವು ಚೆನ್ನಾಗಿ ಗೊತ್ತಾಗುವುದಲ್ಲದೆ ಅವಿದ್ಯಾವಂತರ ಬುದ್ಧಿಗಳುಕೂಡ ಪ್ರೌಢವಾಗುವುದರಲ್ಲೇನೂ ಸಂಶಯವಿಲ್ಲ. ಆದರೆ

ಪೂರ್ವದ ನಾಟಕಗಳಾಗಲಿ, ಇತಿಹಾಸಗಳಾಗಲಿ ಸಾಧಾರಣವಾಗಿ ಆಯಾ ಕಾಲದ ಆಯಾ ದೇಶದ ಜನರ ನಡವಳಿ ಸ್ವಭಾವ, ವೇಷ ಮುಂತಾದವುಗಳನ್ನು ಆ ನಾಟಕಾದಿಗಳಲ್ಲಿ ತಿಳಿಸುವುದರಿಂದ ಓದುವವರಿಗೆ ನೋಡುವವರಿಗೆ ಬಹು ಪ್ರಯೋಜನವುಂಟಾಗುವುದೆಂಬ ಆಲೋಚನೆಯಿಂದ ಈ ವಸಂತಮಿತ್ರ ವಿಜಯವೆಂಬ ಹೆಸರುಳ್ಳ ರೂಪಕವು ರಚಿಸಲ್ಪಟ್ಟಿದೆ. ಇದರಲ್ಲಿ ನಾಯಕನಾದ ವಸಂತಮಿತ್ರನೆಂಬ ಮಂತ್ರಿಪುತ್ರನಲ್ಲಿ ರಾಜನಿಗೆ ಒಬ್ಬ ವೇಶ್ಯೆಯ ಕಪಟದಿಂದ ದ್ವೇಷವುಂಟಾಗಿ ಆ ರಾಜನು, ಆ ದೇಶವನ್ನೇ ಬಿಟ್ಟು ಮತ್ತೊಂದು ದೇಶಕ್ಕೆಹೋಗಿ, ಆದೇಶದ ರಾಜನ ಮಗಳನ್ನು ವಿವಾಹಮಾಡಿಕೊಳ್ಳುವುದಕ್ಕೆ ಪ್ರಯತ್ನಿಸಿರಲಾಗಿ, ವಸಂತಮಿತ್ರನು ತ್ರಿಕಾಲಜ್ಞನಾದ ಒಬ್ಬ ಮಹಾಪುರುಷನ ಮುಖದಿಂದ ತನ್ನ ರಾಜನಿಗೆ ಆನಂದವತಿಯೆಂಬ ರಾಜಪುತ್ರಿಯಿಂದ ಸಂಭವಿಸುವ ಹಾನಿಯನ್ನು ತಿಳಿದು, ಅಲ್ಲಿಗೆ ಹೋಗಿ ಪ್ರಾಣಾಪಾಯಕ್ಕೆ ಗುರಿಯಾಗಿ, ಅದನ್ನು ತಪ್ಪಿಸಿಕೊಂಡು ಆ ರಾಜನ ಶವವನ್ನು ತೆಗೆದುಕೊಂಡು ಮತ್ತೊಂದು ದೇಶಕ್ಕೆ ಹೋಗಿ ಕಾಳಿಕಾನುಗ್ರಹಕ್ಕೆ ಪಾತ್ರಳಾಗಿರುವ ಆದೇಶದ ಅರಸನ ಮಗಳಾದ ಶುಭಾಂಗಿಯನ್ನು ತನ್ನ ರಾಜನಾದ ಸೌಗಂಧಿಕನನ್ನು ಬದುಕಿಸಿಕೊಳ್ಳುವ ಉದ್ದೇಶದಿಂದ ಮದುವೆಮಾಡಿಕೊಂಡನೆಂಬುವುದೇ ವಿಷಯವು.

ಎಂಥಾ ಕಷ್ಟಬಂದರೂ ಸೈರಿಸಿಕೊಂಡು ಮಿತ್ರರನ್ನು ಕಾಪಾಡುವುದೇ ಸನ್ಮಿತ್ರರ ಲಕ್ಷಣವು; ಮತ್ತು ಸ್ತ್ರೀಯರೇ ಹಾನಿಗೂ ವೃದ್ಧಿಗೂ ಕಾರಣವು; ಎಂಬ ಈ ಎರಡು ನೀತಿಗಳು ಈ ಗ್ರಂಥವನ್ನು ಓದುವವರಿಗೆ, ಅಥವ ಈ ಪ್ರಕರಣವನ್ನು ನೋಡುವವರ ಮನಸ್ಸಿನಲ್ಲಿ ನೆಲೆಗೊಳುವುದು. ಇದೇ ಈ ಗ್ರಂಥಕ್ಕೆ ಮುಖ್ಯಪ್ರಯೋಜನವೆಂದು ನೆನಸಬೇಕು. ಈ ಪ್ರಕರಣದಲ್ಲಿ ವಾಕ್ಯಗಳು ಈ ಕಾಲದಲ್ಲಿ ವಾಡಿಕೆಯಾದ ಕನ್ನಡಮಾತಿನಿಂದಲೂ, ಪದ್ಯಗಳು ಸಾಧಾರಣವಾದ ಹಳೆಗನ್ನಡಮಾತುಗಳಿಂದಲೂ ರಚಿಸಲ್ಪಟ್ಟಿವೆಯಲ್ಲದೆ ಕವಿತಾಪಾಂಡಿತ್ಯವನ್ನು ತೋರಿಸಬೇಕೆಂದು ಗರ್ವದಿಂದ ಕ್ಲಿಷ್ಟವಾದ ಸಂಸ್ಕೃತಮಾತುಗಳನ್ನಾದರೂ ಅತಿದುರವಗಾಹವಾದ ಹಳೆಗನ್ನಡ ಮಾತುಗಳನ್ನಾದರೂ ಪ್ರಯೋಗಿಸಿಲ್ಲ. ನಾಟಕವನ್ನಾಡುವವರಿಗೆ ಅನುಕೂಲಿಸುವಂತೆ ಸಮಯಾನುಸಾರವಾಗಿ ನೂತನವಾಗಿಯೂ ಶ್ರಾವ್ಯವಾಗಿಯೂ ಇರುವ ಮಟ್ಟುಗಳು ಕೂಡ ಪ್ರತ್ಯೇಕವಾಗಿ ಸೇರಿಸಲ್ಪಟ್ಟಿವೆ

ಮುಖ್ಯವಾಗಿ ಈ ಕಾಲಕ್ಕೆ ಅನುಗುಣವಾಗಿಯೂ ಸ್ವಭಾವವನ್ನೇ ಅನುಸರಿಸಿ ಈ ಪ್ರಕರಣದ ಪ್ರಾರಂಭದಿಂದ ಅಂತ್ಯದವರೆಗೂ ಬರೆದಿರುವ ವಿಷಯಗಳನ್ನು ವಾಚಕರು ಚೆನ್ನಾಗಿ ಓದಿ ಗ್ರಹಿಸುವುದರಿಂದ ಅವರ ತಿಳುವಳಿಕೆಯು ವೃದ್ಧಿಯಾಗುವುದರಲ್ಲಿ ಸಂಶಯವಿಲ್ಲ.

ಮೈಸೂರು. } ಪಿ. ಆರ್. ಕರಿಬಸವಶಾಸ್ತ್ರಿ.
೨೪-೨-೧೯೦೬. } ಮಹಾರಾಜಾಕಾಲೇಜು ಕರ್ನಾಟಕ ಪಂಡಿತ.

# ವಸಂತಮಿತ್ರವಿಜಯ ನಾಟಕಂ.

—o—

## ಪ್ರಥಮಾಂಕಂ.

ವೃತ್ತ॥ ಶ್ರೀರಾಮಾ ವಾಸವಕ್ಷಸ್ಥಳನಖಿಲ ಜಗತ್ಸೇವ್ಯ ಪಾದಾಂಬುಜಾತಂ।
ಧೀರೌಘಶ್ಲಾಘಿತೋದ್ಯದ್ಗುಣಮಣಿಗಣ ದೀಪ್ತಾಮಲಸ್ವಾಂತಕಾಂತಂ॥
ಕ್ಷೀರಾಂಭೋರಾಶಿ ಜಾಮಾತರನವನಿಸುತಾ ಜೀವಿತೇಶಂನಿತಾಂತಂ।
ಶ್ರೀರಾಮಂ ಕಾಮಿತಾರ್ಥಂಗಳನೆಮಗತುಲಪ್ರೇಮದಿಂದೀಗೆನಿಚ್ಚಂ॥ ೧ ॥

ಸೂತ್ರಧಾರ. (ರಂಗಕ್ಕೆಪ್ರವೇಶಿಸಿ) ಸಾಕು, ಸಾಕು, ಅತಿವಿಸ್ತರದಿಂದೇನು ಪ್ರಯೋಜನ. ಅಪೂರ್ವಕಥಾಸಂದರ್ಭಗಳಿಂದ ಅಲಂಕೃತವಾಗಿಯೂ, ಸಚಿವಶಿರೋಮಣಿಯೆನಿಸಿ ದಿಗಂತವಿಖ್ಯಾತನಾದ ವಸಂತಮಿತ್ರನ ಚರಿತ್ರೆಯಿಂದ ಮನೋಹರವಾಗಿಯೂ ಇರುವ "ವಸಂತಮಿತ್ರವಿಜಯ" ಎಂಬ ನಾಟಕವನ್ನು ಮ॥ ಆನವಟ್ಟಿ ರಾಮರಾಯನು ಮಾಡಿರುವನೆಂದು ಜನಗಳು ಆಡುತ್ತಿದ್ದಮಾತು ಕಿವಿಗೆ ಬಿತ್ತೇ ಹೊರತು, ಅದರ ಅಭಿನಯವನ್ನು ಬೇರೆ ಕಣ್ಣಾರ ನೋಡಲಿಲ್ಲ. ಆನಾಟಕವನ್ನುಪ್ರಯೋಗಾನುಸಾರವಾಗಿ ಅಭಿನಯಿಸಬೇಕೆಂದು ನಮ್ಮೊಡೆಯನಾದ ಶ್ರೀಕೃಷ್ಣಭೂಪಾಲನ ಆಜ್ಞೆಯಾಗಿರುವುದು. ನಮ್ಮ ಭೂಪಾಲನಾದರೋ:

---

ರಾಗ—ಶ್ಯಾಮಕಲ್ಯಾಣಿ. ರೂಪಕ.

ಶ್ರೀರಮಾಮೋದಕರ। ಕಾರುಣ್ಯರತ್ನಾಕರ। ಶ್ರೀಕರ। ಶೋಭಾಕರ। ನಾರೀಜನಮೋಹಾಕರ॥ ಪ॥ ನೀರದಕಾಯುಬುಧ। ನಾರದನುತಪದ॥ ಸಾರಸನೇತ್ರಸುರ। ನಾರಸಮಧುಕರ॥ ೧॥ ನಂದನಕಂದಸುರ। ವಂದಿತಗಿರಿಧರ। ಇಂದಿರಾಸುಖಕರ। ಸುಂದರಮಾಲಾಧರ॥ ೨॥ ರಾಮುಖಲಭೀಮರಘು। ರಾಮವರನಾಮಾಂಕಿತ। ಪಾಮರನಾದೆನ್ನನು। ಪ್ರೇಮದಿಪಾಲಿಪುದು॥ ೩॥

ವೃ॥ ಉರಗಂಪಾಸಿಗೆ ವಾರ್ಧಿಮಧ್ಯದೆಪುರಂ ಗೋಪಾಲಕರ್ತನ್ನಮಿ।
ತ್ರರದೆಂದುಃಮನೆಯೊಳ್ಸಪತ್ನಿಯುರಕಾಟಂ ವಾಹನಂಪಕ್ಷಿಯೆಂ॥
ದುರೆಬೇಸರ್ತು ಮುರಾರಿಯೇಜನಿಸಿದಂ ಮೈಸೂರೊಳೆಂದಂದುನಾಂ।
ಪೆರತೇಂ! ಬಣ್ಣಿಪೆನೇಳ್ಗೆಯುಂ ನರವರ ಶ್ರೀಕೃಷ್ಣಭೂಪಾಲನಾ॥ ೨॥

ಆತನ ಆಜ್ಞೆಯನ್ನು ನೆರವೇರಿಸುವುದಕ್ಕೆ ಸಿದ್ಧನಾಗಿರುವೆನು. ಈ ಕಾರ್ಯದಲ್ಲಿ ನನಗೆ ಸಹಾಯಕಳಾದ ನನ್ನ ಪ್ರಿಯೆಯನ್ನು ಕರೆಯುವೆನು. (ಎಂದು ತೆರೆಯಕಡೆನೋಡಿ) ಆರ್ಯೆ, ಅಲಂಕಾರಪೂರ್ತಿಯಾಗಿದ್ದರೆ ಇತ್ತಬಾ.

ನಟಿ. (ಪ್ರವೇಶಿಸಿ ಸೂತ್ರಧಾರನಿಗೆ ಅಭಿವಂದಿಸಿ) ಆರ್ಯನೆ? ಇದೋ ಬಂದೆನು. ನಾನು ಮಾಡತಕ್ಕಕಾರ್ಯವನ್ನು ನಿರವಿಸಬೇಕು.

ಸೂತ್ರಧಾರ. ಪ್ರಿಯೆ? ನವರಸಾಲಂಕಾರಯುಕ್ತವಾಗಿಯೂ, ಚಮತ್ಕಾರವಾಗಿಯೂ ಇರುವ ವಸಂತಮಿತ್ರವಿಜಯವೆಂಬ ನಾಟಕವನ್ನಾಡಿ ಈ ಸಭಾಸದರಿಗೆ ಸಂತೋಷವನ್ನುಂಟುಮಾಡಲು ನಿನ್ನನ್ನು ಕರೆದೆನು.

ನಟಿ. ಪ್ರಿಯನೆ? ಮಾತಿನಚಮತ್ಕಾರದಲ್ಲಿಯೂ, ಅಭಿನಯದಲ್ಲಿಯೂ, ಅದ್ವಿತೀಯರಾಗಿರುವ ಈ ಸಭಾಸದರನ್ನು ನನ್ನ ಮಾತುಗಳಿಂದಲೂ, ಅಭಿನಯದಿಂದಲೂ ಸಂತೋಷಪಡಿಸಲು ಸಾಧ್ಯವೆ?

ಸೂತ್ರಧಾರ. ನೀನು ಇಷ್ಟುಚಿಂತಿಸುವುದಕ್ಕೆ ಕಾರಣವಿಲ್ಲ, ಏಕೆಂದರೆ ಕೇಳು.

ಕಂದ॥ ಮರನಂ ಕೊರೆಹಾಗಳ್ ಷ
ಟ್ಚರಣಂಗಳ್ಕಠಿನಭಾವಮುಂ ತಳೆದಪುವಾ॥
ಪರಮೆಗಳೆ ಕಮಲವನದೊಳ್
ಮರಂದಮುಂಪೀರ್ಗುಮೆನಸುನೋಯದ ತೆರನಂ॥ ॥೨॥

ಹೀಗಿರುವುದರಿಂದ ನೀನು ಸ್ವಲ್ಪವೂ ಶ್ರಮಪಡದೆ ಇವರನ್ನು ಸಂತೋಷಪಡಿಸಬಹುದಲ್ಲವೆ?

ನಟಿ. (ನಮ್ರಳಾಗಿ) ಆರ್ಯನೆ, ಮುಂದಣ ಕಾರ್ಯವೇನು?

ಸೂತ್ರಧಾರ. ಸಮಸ್ತಜನಗಳನ್ನೂ ಆನಂದತುಂದಿಲರನ್ನಾಗಿ ಮಾಡುವುದು ವಸಂತಋತುವಾದುದರಿಂದ ನಾಟಕಾರಂಭದಲ್ಲಿ ಆಋತು

ವನ್ನೀ ಕುರಿತು ಗಾನಮಾಡಿ ಈ ಸಭಿಕರಿಗೆ ಕರ್ಣಾನಂದವನ್ನುಂ ಟುಮಾಡು.

ನಟಿ. ಅಪ್ಪಣೆ.

* ಎಂದು ಗಾನಮಾಡುವಳು.

ಸೂತ್ರಧಾರ. ಪ್ರಿಯೆ? ನಿನ್ನಗಾನದಿಂದ ಈ ಸಭಿಕರು ಚಿತ್ರಪ್ರತಿಮೆಗಳಂತಾದರು. ಆದರೆ ಕೇಳು ಈ ನಾಟಕದ ಕಥಾನಾಯಕನಾದ ವಸಂತಮಿತ್ರನ ಗುಣಾತಿಶಯುವನ್ನು ನಾನು ಏನೆಂದುಸಿರಲಿ.

ಕಂದ || ತರುಣಿಯು ದೆಸೆಯಿಂ ವ್ಯಾತಿಯೊಂ
ದಿರೆಸೌಗಂಧಿಕ ನರೇವಹಿತಮುಂ ಬಗೆದಾ||
ಧರಣೀಶನಬೇವಿತಮುಂ
ಪೊರೆದಂ ಸಖನಹ ವಸಂತಮಿತ್ರಂ ನಲವಿಂ || || ೪ ||

## ಪ್ರಸ್ತಾವನೆ

(ನೇಪಥ್ಯದಲ್ಲಿ) "ಸೌಗಂಧಿಕಮಹಾರಾಜ" ಎಂದು ಕೂಗಿಕೊಳ್ಳುವರು.

ಆರ್ಯಳೆ? ನಮ್ಮ ಮಹಾರಾಜನಾದ ಸೌಗಂಧಿಕನು ಈ ದಿವಸ ವನವಿಹಾರಕ್ಕಾಗಿ ಮಕರಂದೋದ್ಯಾನಕ್ಕೆ ಹೊರಡುವನೆಂಬ ವೃತ್ತಾಂತವಿತ್ತು. ಆದುದರಿಂದ ರಾಜನು ಹೊರಟಂತೆ ತಿಳಿದುಬರುವುದು. ನಾನೂ ರಾಜನ ಸನಿಹದಲ್ಲಿರಬೇಕೆಂದು ಆಜ್ಞೆಯಾಗಿತ್ತು. ಈಗ ನಾನು ಹೋಗದಿದ್ದರೆ ರಾಜನಕೋಪಕ್ಕೆ ಪಾತ್ರನಾಗಬೇಕಾದೀತು. ಹೋಗುವೆನು. (ಹೋಗುವನು)

---

* ರಾಗ—ಕಮಾಚು. ರೂಪಕ.

ಶ್ರೀಭಾಸುರಮಧುಮಾಸವ। ನೆಂತುಬಣ್ಣಿಪೆ ॥ ಪ॥ ತಿಳಿಗೊಳದೊಳು। ನಳನಳಿಸುತ। ಕಳಯುಗುಳುತ। ಬೆಳೆದರಳಿಹ॥ ನಳಿನಗಳೊಳು। ಅಳಿಕುಲಗಳು। ಸುಳಿದರಲನು। ಸೆಳೆಸೆಳೆವುದು ॥೧॥ ಅರಲಸರನು। ವರತರುಣಿಯು। ರುರಕಿಸುವಸು। ಶರನಿಚಯವು ॥ ಅರುಹಲದರ। ಪರಿಯುರಿಯೆನು। ಬೆರೆದಿನಿಯುರು। ಮರುಕಮುಳಿಯೆ ॥೨॥ ಮಂದಮಾರುತ। ನಿಂದುಕಂದದಿ। ಕುಂದಚಂದನ। ಗಂಧವನೊಂದಿ॥ ಮಂದಯಾನದೊ। ಳಿಂದುಬೀಸುತಾ। ನಂದಮೀವನು। ಕುಂದನೀಯುದೆ ॥ ೩ ॥

(ಅನಸೂಯೆಯ ಪ್ರವೇಶ.)

ಅನಸೂಯೆ. ಸಖಿ, ನಮ್ಮ ಒಡತಿಯು ತುಂಬ ವ್ಯಸನಾಕ್ರಾಂತಳಾಗಿರುವಳಲ್ಲ !

ನಟಿ. ಕಾರಣವೇನು ?

ಅನಸೂಯೆ. ಆಕೆಯು ರತ್ನಪುರಿದೇಶಕ್ಕೆ ತಿಲಕಪ್ರಾಯನಾದ ಸೌಗಂಧಿಕಮಹಾರಾಜನನ್ನು ಮೋಹಿಸಿ, ಆತನ ಸಮಾಗಮವು ಎಂದಿಗೆ ಲಭಿಸುವುದೆಂದು ಕಾಲವನ್ನು ನಿರೀಕ್ಷಿಸುತ್ತಿದ್ದಾಗ್ಯೂ ಫಲಿಸದೆ, ರಾಜನಮಂತ್ರಿಯಾದ ವಸಂತಮಿತ್ರನು ರಾಜನನ್ನು ಎಡೆಬಿಡದೆ ಇರುವುದೇ ವ್ಯಸನಕ್ಕೆ ಕಾರಣವು.

ನಟಿ. ಗೆಳತಿ, ನಿಮ್ಮ ಒಡತಿಯಾರು ದಯವಿಟ್ಟು ಬೇಗಹೇಳು.

ಅನಸೂಯೆ. ಪ್ರಸಿದ್ಧಿಹೊಂದಿದ ಚಾರುಶೀಲೆಎಂಬ ವೇಶ್ಯಾಂಗನೆಯೆಂದು ಕೇಳಿಲ್ಲವೇ ?

ನಟಿ. ಆಹಾ ! ನಾನುಬಲ್ಲೆ. ಆದರೇನು ?

ಅನಸೂಯೆ. ಈಗ ಒದಗಿರುವ ಕಾರಣದಿಂದಲೂ, ಪ್ರಕೃತಸ್ಥಿತಿಯಿಂದಲೂ ಆಕೆಯ ಮನೋರಥವು ನೆರವೇರುವುದೆಂದು ತೋರುವುದು. ಅಲ್ಲದೆ ಆಕೆಯು ಮಹಾರಾಜನಮೇಲಣ ವ್ಯಾಮೋಹದಿಂದ

ಕಂದ ॥ ಅಶನವತೊರೆಯುತ್ತೊದಗಿಹ
ಬೆಸನಕ್ಕೆಡೆಯಾಗಿನೀಡಳೆನಗುತ್ತರಮಂ ॥
ಅಸಮಾಸ್ತ್ರನಕೋಟಲೆಯಿಂ
ದಸುವಂಬಿಡುವಂತೆ ತೋರ್ಪುದಾಲಿಸುಸಖಿನೀಂ ॥ ॥ ೫ ॥

ನಟಿ. ಸಖಿ, ನಿಮ್ಮಒಡತಿಯ ಮನೋರಥವು ನೆರವೇರುವಬಗೆ ಹೇಗೆ ?

ಅನಸೂಯೆ. ಹೇಗೆಂದರೆ, ಮಹಾರಾಜನು ಈದಿವಸ ಮಕರಂದೋದ್ಯಾನಕ್ಕೆ ವನವಿಹಾರಾರ್ಥವಾಗಿ ಪ್ರಯಾಣಸನ್ನದ್ಧನಾಗಿರುವನಂತೆ. ನಮ್ಮ ಒಡತಿಯೂ ಅಲ್ಲಿಗೆಹೋಗಿ ತನ್ನ ಮನೋರಥವನ್ನು ನೆರವೇರಿಸಿಕೊಳ್ಳುವಳೆಂದು ತಿಳಿದುಬಂತು. ನಾನು ಬಂದು ಬಹಳ

ಹೊತ್ತಾಯಿತು. ನಮ್ಮ ಒಡತಿಯು ಕೋಪಿಸಿಕೊಂಡಾಳು ಹೋಗುವೆನು. (ಹೋಗುವಳು)

ನಟಿ. (ಸ್ವಗತಃ) ಆಹಾ! ಏನುಗತಿ, ಆ ವೇಶ್ಯಾಂಗನೆಯು ತನ್ನ ಮನೋಭೀಷ್ಟವನ್ನು ನೆರವೇರಿಸಿಕೊಳ್ಳಲು ನಮ್ಮ ಮಹಾರಾಜನಿಗೂ, ಆತನ ಸಚಿವನಾದ ವಸಂತಮಿತ್ರನಿಗೂ ಪರಸ್ಪರ ದ್ವೇಷವನ್ನುಂಟುಮಾಡುವಳೊ ಏನೋ ಕಾಣೆನಲ್ಲ. ಯೋಚಿಸಿ ಪ್ರಯೋಜನವಿಲ್ಲ. ಈ ವಿಷಯವನ್ನು ನನ್ನಪ್ರಿಯನೊಡನೆ ಹೇಳುವೆನು. (ಹೋಗುವಳು)

ಸ್ಥಾನ ೧.—ರಮ್ಯವಾದ ಲೀಲಾಗೃಹ.

ಚಾರುಶೀಲೆಯು ವ್ಯಸನದಿಂದ ಕುಳಿತಿರುವಳು.

ಚಾರುಶೀಲೆ.

* ಕಂದ ॥ ಅರಲಂಬನೆ ಪೊಣರುತೆನೀಂ
ಗಿರಿಶನೊಳೆವಮಾನಮಾಂತೆ ಮೊದಮುದನೀಗಳ್ ॥
ಸ್ಮರಿಸುತ್ತೆಮೋದದಿನೆನ್ನೊಳ್
ಖರತರಸುಮಶರವನಿಸುವರೇನಕಟಕಟಾ॥ ॥ ೬ ॥

ಹಾ! ಕಷ್ಟ, ಕಷ್ಟ, ನಾನುಮಾಡಿದ ಅನೇಕಪ್ರಯತ್ನಗಳಲ್ಲಿ ಒಂದಕ್ಕೂ ದಾರಿಯನ್ನು ಕೊಡದೆ, ನನ್ನ ಮೋಹನಾಂಗನಾದ ಸೌಗಂಧಿಕನನ್ನು ಎಡಬಿಡದೆ ಕಾದುಕೊಂಡಿರುವ ಆ ವಸಂತಮಿತ್ರನು ಎಷ್ಟುಬುದ್ಧಿವಂತನಾಗಿರುವನಲ್ಲ! ಏನುಮಾಡಲಿ, ಒಂದುವೇಳೆ ಸ್ನೇಹಿತನು ಮಹಾರಾಜನನ್ನು ಬೇರೇಸ್ಥಳಕ್ಕೆ ಪ್ರಯಾಣಮಾಡಿಸಿದುದಾದರೆ, ನಾನು ಮಾಡತಕ್ಕುದೇನು? ಗಾಳಿಯು ಬೀಸಿದಹಾಗೆಲ್ಲಾ ದೋಣಿಯು ನೀರಿನಮೇಲೆ ತೇಲಿಕೊಂಡು ಹೋಗುವಂತೆ, ಮಿತ್ರನು ಹೇಳಿದಹಾಗೆಲ್ಲಾ ಮಹಾರಾಜನು ನಡೆಯುತ್ತಿರುವನಲ್ಲ! ಇಷ್ಟು ಹೊತ್ತಾದರೂ ನಮ್ಮ ಸಖಿಯರು ಇನ್ನೂ ಏಕೆ ಬರಲಿಲ್ಲ?

---

* ರಾಗ—ಭೈರವ. ಛಾಪು.

ಕಂದರ್ಪನಂದಮೊಂದಿದ। ಸುಂದರನೆಂದುಪೊಂದುವೆ। ಇಂದೆಂತುದಂದುಗದಿಂದ। ಕಂದುವೆಸುಂದರಾಂಗನಿಂ ॥ ಪ ॥ ಸಾರಸಾರಸಸಾಯಕನ। ಸೂರೆ

(ಹಂಸಗಮನೆ, ಅನಸೂಯೆ ಪ್ರವೇಶಿಸುವರು)

ಎಲೌ ಸಖಿಯರಿರಾ, ನಿಮ್ಮನ್ನು ಎಷ್ಟುಹೊತ್ತುಕಾದಿರಲಿ? ವಿಶೇಷ ವರ್ತಮಾನವೇನು? ಜಾಗ್ರತೆಯಾಗಿಹೇಳಿ?

ಹಂಸಗಮನೆ. ಒಡತಿ, ಈ ದಿವಸ ಮಹಾರಾಜನು ತನ್ನ ಸ್ನೇಹಿತನಾದ ವಸಂತಮಿತ್ರನೊಡನೆ ವನವಿಹಾರಾರ್ಥವಾಗಿ ಹೊರಡುವನೆಂಬ ವೃತ್ತಾಂತವಿದೆ.

ಅನಸೂಯೆ.

ಕಂದ ॥ ನೀರದವಿಸರಂಮುಸುಕಿರೆ
ನೀರಣಗನುಕಾಂತಿಹೀನನಾಗುವತೆರದಿಂ ॥
ನಾರಿರ್ಪಸಚಿವನೊಡನಾ
ಭೂರಮಣನಿರಲವನೇನಗೈವನೊಕಾಣೆಂ ॥ ॥ ೭ ॥

ಹಂಸಗಮನೆ.

ಕಂದ ॥ ನಾರಾಮೃತಪಂಸವಿಯುಲ್
ನೀರೇರುಹದತ್ತ ನಾರದಾರಡಿತಾನುಂ ॥
ನಾರಾಕಾರವಿಚಾರೆಯೆ !
ಆರೈವೃತೆಗೊಬ್ಬಳಿಬಳಿನಾರ್ವುದೇಪೇಳೌ ॥ ॥ ೮ ॥

ಚಾರುಶೀಲೆ. ಗೆಳತಿಯರಿರಾ, ನಿಮ್ಮಿಚ್ಛಾತುರೋಕ್ತಿಗಳದಂತಿರಲಿ. ಮಹಾರಾಜನನ್ನು ಸೇರಲು ನನಗೆ ಯಾವಉಪಾಯವನ್ನು ಹೇಳುವಿರಿ?

ಅನಸೂಯೆ. ನಿನ್ನಬುದ್ಧಿಗೆತಕ್ಕಸೌಂದರ್ಯವೂ, ಸೌಂದರ್ಯಕ್ಕೆತಕ್ಕ ಚಾತುರ್ಯವೂ, ಇವೇ ನಿನಗೆ ತಕ್ಕಸಾಧನಸಾಮಗ್ರಿಗಳಾಗಿರುವಲ್ಲಿ, ನಮ್ಮ ಉಪಾಯದಿಂದೇನು?

ಹಂಸಗಮನೆ. ವಿದ್ಯಾವಂತನು ನ್ಯಾಯವನ್ನು ಬಿಡದೆ ಸನ್ಮಾರ್ಗದಲ್ಲಿ ನಡೆಯುತ್ತಿದ್ದಾಗ್ಗೆ, ನಮ್ಮಹಾವಭಾವವಿಲಾಸಗಳು ಆತನನ್ನು

---

ಸಹಿಸೆನು ॥ ಸೇರಿಮನಸಾರಚೆಂದುಟಿಯ। ಸಾರಪೀರ್ವೆನು ॥೧॥ ಆರೀಗದಾರಿದೋರ್ಪರೊಗುಣನಾರನೀರನೆ ॥ ಮಾರಾರಿಕೃಪೆಯುಮೀರ್ದನೆಹಾ। ಕರುಣಾಪೂರನೆ ॥೨॥ ಇನ್ನೆಂದಿಗವನುನನ್ನಿಯಿಂದ। ಲೆನ್ನಮನ್ನಿಸಿ॥ ಎನ್ನಬನ್ನವನ್ನುಕಳೆವ ಸನ್ನುತಾಂಗನು ॥೩॥

ಸೆರೆವಿಡಿಯಲಾರವು. ಅಂತಹ ಪುರುಷನು ನಮ್ಮಮನೋಗತದಂತೆ ನಡೆಯುವನೆ, ಎಂದಿಗೂ ಇಲ್ಲ.

ಅನಸೂಯೆ. ಅಬಲೆಯರ ಮೋಹಪಾಶಕ್ಕೊಳಗಾಗುವನು ಅವಿವೇಕಿ. ಚಾತುರ್ಯವೋಸವೆಂಬುವುದೇಆತನ ಸಾಧನಸಾಮಗ್ರಿಯು. ಇಂತವನನ್ನು ನಂಬಿದರೆ ನಮ್ಮ ಸರ್ವಸ್ವಾಪಹಾರವನ್ನು ಮಾಡುವನು. ಆದುದರಿಂದ ನೀಚರಿಗೆ ನೀಚರೇಸೇರಿದರೆ ಅನುಕೂಲ, ಮಹಾರಾಜನ ಮಾತೇಕೆ ಬಿಡು.

ಹಂಸಗಮನೆ. ನಿಜ, ಸಖಿ, ಮಹಾರಾಜನು ಚತುರನಾದ ಮಂತ್ರಿಯೊಡನೆ ಇರುವುದರಿಂದ ಆತನು ನಮ್ಮ ಉಪಾಯಗಳಿಗೆ ಒಳಪಡುವುದೆಂದರೇನು ?

ಚಾರುಶೀಲೆ. ಒಡನಾಡಿಯರೆ, ನಿಮ್ಮಮಾತು ಸತ್ಯ. ಹೋಗಿ ನನ್ನ ಅಲಂಕಾರಸಾಮಗ್ರಿಗಳನ್ನು ಸಿದ್ಧಪಡಿಸಿಕೊಂಡಿರಿ. ನಾನೂ ಜಾಗ್ರತೆಯಲ್ಲಿಯೇ ಬರುವೆನು. (ಚೇಟಿಯುವರು ಹೋಗಮೇಲೆ—ಸ್ವಗತ)—ಮಹಾರಾಜನು ವನವಿಹಾರಕ್ಕೆ ಹೊರಡುವನೆಂದು ನಮ್ಮ ಸಖಿಯರಿಂದ ತಿಳಿದುಬಂತು. ನಾನೂ ಅಲ್ಲಿಗೆಹೋಗಿ, ಸಾಧ್ಯವಾದುದಾದರೆ ನನ್ನ ಶೃಂಗಾರಚೇಷ್ಟೆಗಳಿಂದ ರಾಜನನ್ನು ಮರುಳುಗೊಳಿಸಿ ನನ್ನ ಮನೋರಥವನ್ನು ನೆರವೇರಿಸಿಕೊಳ್ಳುವೆನು. ಸಾವಕಾಶದಿಂದ ಪ್ರಯೋಜನವಿಲ್ಲ. (ಹೋಗುವಳು.)

ಸ್ಥಾನ ೨.—ಸೌಗಂಧಿಕನ ಅಂತಃಪುರ.

ಸೌಗಂಧಿಕ. ಸಖನೆ, ಗುರುಶಿಕ್ಷೆಯಿಂದ ಸಕಲವಿದ್ಯವೂ ಕರಗತವಾಗಿರುವುವು. ನಮ್ಮ ಪಟ್ಟಣದ ಹೊರಗಿರುವ ಮಕರಂದೋದ್ಯಾನಕ್ಕೆ ಹೋಗಿ, ಮಹಾತ್ಮರ ಸಂದರ್ಶನಮಾಡಿಕೊಂಡು ಬರಬೇಕೆಂದು ನನ್ನ ಅಭಿಪ್ರಾಯವಿದೆ. ಬರುವೆಯಾ ಹೋಗೋಣ. ಆದರೆ ವನವಿಹಾರಕ್ಕೂ ಇದೇಸಮಯ.

ವಸಂತಮಿತ್ರ. ಆರ್ಯನೆ, ಆಶ್ರಮವಾಸಿಗಳ ದರ್ಶನಕ್ಕೆ ಹೋಗುವುದು ಸಹಜವೇಸರಿ. ಆದರೆ ವನವಿಹಾರಕ್ಕೆ ಹೋಗುವುದು ಸಮ್ಮತವಲ್ಲ. ಏಕೆಂದರೆ, ಈ ವಸಂತಕಾಲದಲ್ಲಿ ಸ್ತ್ರೀಯರು ಬೇಸರಿಕೆ

ಯನ್ನು ನಿವಾರಿಸಿಕೊಳ್ಳಲು ವಿನೋದಾರ್ಥವಾಗಿ ಅಲ್ಲಿಗೆ ಬರುವುದುಂಟು. ಅಂತಹ ಸ್ಥಳಕ್ಕೆ ಹೋದರೆ ಕೇಡೇನಾದರೂ ಸಂಭವಿಸೀತೆಂಬ ಯೋಚನೆಯಿದೆ. ಆದುದರಿಂದ ಈ ಯೋಚನೆಯನ್ನು ನಿಲ್ಲಿಸಬೇಕೆಂದು ಬೇಡುವೆನು.

ಸೌಗಂಧಿಕ. ಮಿತ್ರನೆ, ಅಬಲೆಯರಿಂದ ನಾವು ಮೋಸಹೋಗುವುದೆಂದರೇನು, ಅವರಿಂದ ಕೇಡು ಸಂಭವಿಸುವುದೆಂದರೇನು? ನನ್ನ ಯೋಚನೆಗೆ ಒಂದೊಂದು ನಿರ್ಬಂಧವನ್ನೇಹೇಳುತ್ತಿರುವಿಯಲ್ಲಾ!

ವಸಂತಮಿತ್ರ. ನನ್ನಮಾತನ್ನು ಯಾವಾಗಲೂ ಧಿಕ್ಕರಿಸದಿದ್ದ ನಿನಗೆ ಈದಿವಸ ಇಂತಹಬುದ್ಧಿ ಹುಟ್ಟುವುದಕ್ಕೆ ಕಾರಣವೇನು? ಸ್ತ್ರೀಯರುಎಂತಹವರೆಂದು ತಿಳಿದಿರುವೆ! ಕೇಳು,

ಕಂದ॥ ಸಾವಿಂಗೆಣಿಸರ್ದಿಟಮಂ
ಭಾವಿಸರ್ಪುಸಿಯನೊಂದುಮಿಗೆಕೊಲ್ಲಿಸುವರ್॥
ವಾವೆಯನೆಣಿಸರ್ಸತ್ಯಕೆ
ಪಾವಕನಂಪಡಿವಮಾಯಗಾತಿಯರಕಟಾ॥ ॥೯॥

ನಿನಗೆ ನಿಜವಾಗಿಯೂ ಮುಂದಿನ ಯೋಚನೆಯೇ ಇಲ್ಲವೆಂದು ತೋರುತ್ತೆ.

ಸೌಗಂಧಿಕ. ಸೂರ್ಯ್ಯಾಸ್ತಮಯದೊಳಗಾಗಿಯೇ ಬರುವುದಾದರೆ ಬರುವೆಯಾ.

ವಸಂತಮಿತ್ರ. ಇದು ನಿಜವೇ! ಏಕೆಂದರೆ ರಾಜರವಾಗ್ದಾನವು ವೇಶ್ಯೆಯಪ್ರಮಾಣದಷ್ಟೇ ನಿಜವಾಗಿರುವುದೆಂದು ತಿಳಿದಿರುವೆನು. ಹೇಗೆಂದರೆ:

ಕಂದ॥ ಪುಸಿಯಂಮೇಣ್ದಿಟಮಂಯೋ।
ಚಿಸಿಮೆಲ್ನುಡಿಬಿರುನುಡಿಗಳನಿರದೊರೆಯುತ್ತಂ॥
ಬಿಸವಂ ಕುಡಿಸುತನರ್ಥಕೆ।
ರಸೆಯಾಣ್ಮನ ನೀತಿವೇಶ್ಯೆಯಂತೆಸೆದಿರ್ಕುಂ॥ ॥೧೦॥

---

ರಾಗ—ಕಲ್ಯಾಣಿ. ಛಾಪು.

ಸೌಗಂಧಿಕ.—ಏತಕೆಸಚಿವನೆ। ಈತೆರನುಡಿಯುವೆ॥ ನೀತಿಯನುಳಿದುವಿ।
ನೀತನಾಗುವೆನೆನಾ॥ ಪ॥

ಸೌಗಂಧಿಕ. ಸಚಿವನೆ? ನಿನ್ನ ಪರಿಹಾಸ್ಯವು ಸಾಕು. ಯೋಚನೆ ಮಾಡಬೇಡ; ಹೋಗೋಣಬಾ.

ವಸಂತಮಿತ್ರ. (ಸ್ವಗತಃ) ರಾಜಾಜ್ಞೆಯನ್ನು ಸಂಪೂರ್ಣವಾಗಿ ಉಲ್ಲಂಘಿಸುವುದು ಯೋಗ್ಯವಲ್ಲ. ಮಾಡತಕ್ಕದ್ದೇನು. ರಾಜನೆ, ನಡೆ ಹೋಗೋಣ.

(ರಾಜನು ಹೋಗುವನು. ವಸಂತಮಿತ್ರನೂ ಸ್ವಲ್ಪದೂರಹೋಗಿ ಹಿಂದಕ್ಕೆಬಂದು)

ಕಂದ॥ ಅದಿರ್ಪ‌ದೆಡಗಣ್ಣಿದೀಗಳ್
ಹೃದಯದೊಳೊದಗಿರ್ಪ‌ಭೀತಿಬಣ್ಣಿಸಲರಿದೈ ॥
ಮಧುವೈರಿಯಕೃಪೆಯಿರ್ದೊಡೆ।
ಮುದಮೊದಗುವುದೆಂದು ಮನದೊಳಾಂನಂಬಿರ್ಪೆಂ॥ ॥೧೧॥

---

ಸ್ಥಾನ ೩.—ಮಕರಂದೋದ್ಯಾನ.

(ಚಾರುಶೀಲೆ, ಅನಸೂಯೆ, ಹಂಸಗಮನೆಯರು ಪ್ರವೇಶಿಸುವರು.)

ಚಾರುಶೀಲೆ. ಎಲೌ ಅನಸೂಯೆ? ಈ ಉದ್ಯಾನವನವು ಎಷ್ಟು ಆಹ್ಲಾದಕರವಾಗಿರುವುದು ನೋಡಿದೆಯಾ? ಸೊಂಪಾಗಿ ಬೆಳೆದಿರುವ ಈ ಸಹಕಾರಕ್ಕೆ ಹಬ್ಬಿರುವ ಈ ಮಲ್ಲಿಕಾಲತೆಯಿಂದ ಶೋಭಿಸುತ್ತಿರುವುದರಿಂದ ಇದನ್ನು ನೋಡಿದರೆ,

ಕಂದ॥ ಅರಲುಣಿ ಪಾಡುತ್ತಿರೆಮಾ
ಮರಮೆನಿಪಾರಂಗ ತಲದೆ ನರ್ತಿಪಮಲ್ಲೀ॥
ತರುಣಿಧರಿಸಿರ್ಪ‌ಮುತ್ತಿನ
ಸರದಂದದೆ ಮೊಗ್ಗೆಗಳ್ ವಿರಾಜಿಕುಮೀಗಳ್॥ ॥೧೨॥

---

ವಸಂತ.—ನಂಬಲಾಗದು ಕಿಳಿ। ಅಂಬುಜನೇತ್ರೆಯರ॥ ನಂಬಲುಮೋಸಕೆ। ಇಂಬಾಗಿಪರುಸಖ॥೧॥

ಸೌಗಂಧಿಕ.—ತರುಣಿಯುನೆಲೆಯನು। ಅರಿತಿಹಭೂಪನು॥ ಅರಿಮೆಯಿರಲುಕಡು। ಬೆರಗಾಗುವೆನೆಬಿಡು॥೨॥

ಮನೋಹರವಾದ ವಸ್ತುಗಳಿಂದ ಕೂಡಿರುವ ಈ ಸ್ಥಳವು ನಮಗೆ ಯೋಗ್ಯವು.

ಹಂಸಗಮನೆ ಸಖಿ, ನಿಜ, ಪೂರ್ಣಚಂದ್ರೋದಯದಿಂದ ಸಮುದ್ರವು ಉಕ್ಕುವಂತೆ, ಈ ವನವಿಹಾರದಿಂದ ನಿನ್ನ ಮುಖಕಾಂತಿಯು ಇನ್ನೂ ಹೆಚ್ಚುತ್ತಿರುವದು. ಅಲ್ಲದೆ, ಇತ್ತನೋಡು,

ಕಂದ॥ ತರುಣಿಯೆ ನಿನ್ನಯ ಮೊಗಸಸಿ
ಯಿರವಂ ನಿರುಕಿಸುತೆ ಕುಂದುತಿಹುದರವಿಂದಂ॥
ಅರಲುಣಿ ನಿನ್ನಾಲಾಪವ
ನಿರದಾಲಿಸಿ ನಾಚಿವತಾನವುಂ ತಳೆದಿರ್ಕುಂ॥ ॥೧೩॥

ಚಾರುಶೀಲೆ. ನನ್ನ ಮನೋರಥವೆಂಬ ಪುಷ್ಪವು ಎಂದಿಗೆ ಅರಳುವುದೊ ಕಾಣೆನಲ್ಲ.

ಅನಸೂಯೆ. ಚತುರಳಾದ ನಿನಗೆ ಸುಖವುಂಟಾಗದಿರುವುದೆಂದರೇನು?

ಚಾರುಶೀಲೆ. ನಾನು ಅಷ್ಟುಪುಣ್ಯವಂತಳೆ? ಇದು ಹಾಗಿರಲಿ ಸಖಿ, ಅನಸೂಯೆ, ಮಹಾರಾಜನು ವನವಿಹಾರಕ್ಕೆ ಬರುವನೆಂದು ಹೇಳಿದೆಯಲ್ಲ, ಇನ್ನೆಷ್ಟುಹೊತ್ತಿಗೆ ಬರುವನು?

ಅನಸೂಯೆ. (ಸುತ್ತಲೂನೋಡಿ) ಅದೋನೋಡು! (ಕೈಯೆತ್ತಿತೋರಿಸಿ) ಮಹಾರಾಜನು ತನ್ನ ಮಿತ್ರನೊಡನೆ ಬರುವಂತಿದೆ.

ಚಾರುಶೀಲೆ. (ಚೆನ್ನಾಗಿನೋಡಿ) ಸಖಿಯರಿರಾ! ನನ್ನ ಅಲಂಕಾರಸಾಮಗ್ರಿಗಳನ್ನು ಸಿದ್ಧಪಡಿಸಿಕೊಂಡಿರಿ. ನಾನೂ ಜಾಗ್ರತೆ

---

ವಸಂತ.—ಸುಂದರಿದ್ರೌಪದಿಯು। ಅಂದುಕೀಚಕನನು॥ ಚಂದದಿಕೊಲ್ಲಿಸಿದ। ಅಂದವಮರೆದೆಯ॥೩॥

---

ರಾಗ—ಭೈರವ ರೂಪಕ.

ವನವೈಭವಂ ವಿಚಿತ್ರ, ವಿನೋದವನು ಮಾಳ್ಪುದು। ಮನಕೀಗ ಮೋಘಮಾಮರವು ಮೋದಮೀವುಗುಂ॥೧॥ ಸರೋಜ ಸಾರಸಂಗ್ರಹಕೆ ಸಾರಿಶೋಭಿಪ। ಮರಾಳಮಂದ ಮಾರುತಗಳು ಮೆಲ್ಲನೈದುವುವು ॥೨॥ ಮನೋಜನೇಕೆ ಮಾನಿನಿಯುರವಾ ನಗೆಡಿಸುವ। ವಿನೋದ ಪೆಂತೆಂಗೈವುದು ಕಾಮನಿಯರಿಗೆ॥೩॥

ಯಲ್ಲಿಯೇ ಬರುವೆನು. (ಚೇಟಿಯರು ಹೋದಮೇಲೆ, ಸ್ವಗತಃ) ಇನ್ನು ನಾನು ಈಗಲೇ ಇವರಿಗೆ ಕಾಣಿಸಿಕೊಂಡರೆ ಮಿತ್ರನು ಬೇರೆ ಯೋಚನೆಮಾಡಾನು. ಈ ಮಾವಿನ ಮರದ ಹಿಂದೆ ಅವಿತುಕೊಂಡು, ಅವರಾಡುವ ಮಾತುಗಳನ್ನು ಮೊದಲುಕೇಳಿ, ಅನಂತರ ಮುಂದಿನ ಯೋಚನೆಯನ್ನು ಮಾಡುವೆನು. (ಮರೆಯಾಗಿ ನಿಲ್ಲುವಳು.)

(ವಸಂತಮಿತ್ರನೂ, ಸೌಗಂಧಿಕನೂ ಪ್ರವೇಶಿಸುವರು.)

ವಸಂತಮಿತ್ರ * (ಸುತ್ತಲೂ ನೋಡಿ) ಆಹಾ! ಈ ವನವು ಎಷ್ಟು ಮನೋಹರವಾಗಿರುವುದು. ಇಲ್ಲಿರುವ ಸಾಧುವಾದ ಜಿಂಕೆಗಳ ಸಮೂಹವನ್ನೂ, ಗಾನಮಾಡುತ್ತಿರುವ ಗಿಳಿಗಳ ಇಂಪಾದ ಸ್ವರಗಳನ್ನೂ, ಬೆಳೆದಿರುವ ಪರಿಮಳಪುಷ್ಪಗಳನ್ನೂ ಹಾಗೆಯೇ ಪರ್ಯಾಲೋಚಿಸಿದುದಾದರೆ, ಪರಮಾತ್ಮನ ಅಪಾರವ್ಯಾಪಾರವೂ, ಅಮೋಘವಾದ ಶಕ್ತಿಯೂ ಮನಸ್ಸಿಗೆ ಹೊಳೆಯುವುದು. ಕಾಲವನ್ನು ಕಳೆದುದಾದರೆ, ಮಹಾತ್ಮರ ಸಂದರ್ಶನಕ್ಕೆ ಕುಂದಕವುಂಟಾದೀತು. ಏಕೆಂದರೆ ಕಾಲವೆಂಬ ಪಕ್ಷಿಯು ಗ್ರಂಥಕರ್ತರ ಹತ್ತಿರಕ್ಕೆ ಹೋಗಿ ನಮಗೆ ಅನುಕೂಲವಾದ ಅನೇಕವಿಷಯಗಳನ್ನು ತಂದು ಕೊಡುವುದು. ಈ ಪಕ್ಷಿಯನ್ನು ನಾವು ತಿರಸ್ಕರಿಸಿದುದಾದರೆ ನಾವೂ ತಿರಸ್ಕೃತರಾಗುವುದರಲ್ಲಿ ಸಂಶಯವಿಲ್ಲ. ಇದಲ್ಲದೆ ಅಮೋಘವಾದ ಮನುಷ್ಯನ ಆಯುಸ್ಸೆಂಬ ಧಾನ್ಯವನ್ನು ಯಮನು ಸೂರ್ಯ, ಚಂದ್ರರೆಂಬ ಬಳ್ಳಗಳಿಂದ ಅಳೆದು ಅಳೆದು ಹಾಕುತ್ತಿರುವನು. ಆದುದರಿಂದ ಉತ್ಕೃಷ್ಟವಾದ ಕಾಲದಲ್ಲಿ ಮಾಡಿದ ಸತ್ಕಾರ್ಯದಿಂದ ಜ್ಞಾನವನ್ನು ಸಂಪಾದಿಸಿಕೊಂಡು, ಪರೋಪಕಾರಿಯೆನಿಸಿ, ಪರಮಾತ್ಮನನ್ನು ತಿಳಿದು, ಯಶಸ್ಸನ್ನು ಆ ಚಂದ್ರಾರ್ಕವಾಗಿರುವಂತೆ ಮಾಡಿ

---

* ರಾಗ — ಬೇಹಾಗ್. ಏಕ.

ನಿರುಕಿಸೀಗ ಬನದಸಿರಿಯು ದೆಂತುಕಾಣ್ಬುದು। ಶೋಭಿಪುದು ॥ ಪ ॥
ಬಿಸಜಕುಸುಮ। ಘುಸೃಣಮೆಸೆವು। ದಸಮುಶರನು। ಒಸೆದುನೆಲೆಸಿ ॥ ನಿಶಿತ
ಸರವ। ನಶಿಯುರಸುವಿ। ಗೆಸೆದುಸಂ। ತಸವನೆಸಗುವ ॥ ೧ ॥ ಮುದದಿಪಿಕದ।
ಮಧುರಸರವು। ಮಧುಪಕುಲವು। ಮಧುವಸವಿವ ॥ ವಿಧವನೋಡು। ಬೆಸರ

ಕೊಳ್ಳದವನಬಾಳು ಏಕೆ? ಹೀಗೆ ನಡೆಯದೆ ರಾಜಪುತ್ರರಿಗೆ ಯುದ್ಧ ಮಾಡುವುದೊಂದೇ ಧರ್ಮವೆಂದು ಭಾವಿಸಿ, ಸೌಖ್ಯದಲ್ಲಿ ಕಾಲವನ್ನು ಕಳೆದರೆ, ಪಟುತರವಾದ ಇಂದ್ರಿಯವ್ಯಾಪಾರಗಳಿಂದ ಮೋಹಾಸಕ್ತನಾಗಿ, ವಿವೇಕಹೀನನಾಗಿ, ದುರ್ಮಾರ್ಗಪ್ರವರ್ತಕನೆನಿಸಿ, ತಮ್ಮ ಕರ್ತವ್ಯವನ್ನೇ ಮರೆತು ಲೋಕನಿಂದಕರಾಗುವ ಅನೇಕರನ್ನು ಪ್ರತಿದಿವಸದಲ್ಲಿಯೂ ನೋಡುತ್ತಿರುವೆನು!

ಸೌಗಂಧಿಕ. ಸಖನೆ, ಈ ಮಂದಮಾರುತನು ತನ್ನ ಶೀತಕರಗಳಿಂದ ನನ್ನ ಆಯಾಸವನ್ನು ಪರಿಹಾರಮಾಡುತ್ತಿರುವುದನ್ನು ಯೋಚಿಸಿ ದೇಹವು ಪರವಶವಾಗಿರುವುದು.

ವಸಂತಮಿತ್ರ. ರಾಜನೆ? ಈ ವನದ ಆಧಿಕ್ಯವನ್ನೇ ನೋಡಿ, ನೋಡಿ ಬಣ್ಣಿಸುವುದರಿಂದ ಕಾಲವು ಕಳೆದುಹೋಗಿ, ಆಶ್ರಮವಾಸಿಗಳದರುಶನಕ್ಕೆ ಕುಂದಕವುಂಟಾದೀತು. ಯೌವನಸ್ಥರಿಗೆ ಪರಿಮಳವಿಶಿಷ್ಟವಾದ ಪದಾರ್ಥಗಳಲ್ಲಿಯೂ, ಸ್ತ್ರೀಯರಲ್ಲಿಯೂ, ಆಸಕ್ತಿಯುಂಟಾಗದಿರುವುದೇ?

ಚಾರುಶೀಲೆ. (ಮರೆಯಲ್ಲಿಯೇನಿಂತು) ಇದಕ್ಕೆ ಸಂದೇಹವೇನು?

ವಸಂತಮಿತ್ರ. ರಾಜನೆ, ಮುಂದಕ್ಕೆ ನಡೆ ಹೋಗೋಣ.

ಚಾರುಶೀಲೆ. ಏನುಮಾಡಲಿ, ಈ ನೀಚನು ನನ್ನ ಮೋಹನಾಂಗನನ್ನು ಮುಂದಕ್ಕೆ ಕರೆದುಕೊಂಡು ಹೋಗುವನಲ್ಲ! ಈಗಲೇ ಹತ್ತಿರಕ್ಕೆ ಹೋಗಲೆ (ಎಂದು ೨-೩ ಹೆಜ್ಜೆಗಳನಿಟ್ಟು) ಎಲೆ ಮನಸ್ಸೇ, ಈಗಲೇ ಆತುರಪಡಬೇಡ.

ಕಂದ॥ ಹೃದಯವೆ ನೀನೇಕಲೆದಪೆ
ಸದಯಾತ್ಮನೊಳಿಹ ಮುದವೆನಿತೆಂದರಸುವೆಯೋ॥
ಮೊದಲೊಳ್ ಸುಖಮಿತ್ತತನುವ
ಮುದದಿಂಮರೆಯುತ ವನೊಳ್ಬರೆವುದುಚಿತಮಿದೇಂ ॥೧೪॥

(ಹಿಂದಕ್ಕೆಹೋಗುವಳು)

---

ಬೇಡ। ಸದಯುಹೃದಯನೆ॥೨॥ ಸೊಂಪಿನಿಂದ। ಪೆಂಪುವಡೆದ। ಸಂಪಗೆಯು। ಗುಂಪಿನಿಂದೆ॥ ಕಂಪುಗೂಡಿ। ತಂಪುಗಾಳಿ। ಇಂಪುವಡೆವುದು॥೩॥ ನಿಲ್ಲದಿಲ್ಲಿ। ಗಲ್ಲಿಹೋಗಿ। ಮಲ್ಲೆಸುಮ। ವೆಲ್ಲವುಡಿದು॥ ಚೆಲ್ಲದಂತೆ। ಎಲ್ಲತರುವ। ಮೆಲ್ಲನೆ ಪೋಪೆಬಾ॥೪॥

ಸೌಗಂಧಿಕ. * ಸಖನೆ, ಈ ಮಾವಿನಮರವನ್ನು ನೋಡಿದೆಯ, ಎಷ್ಟುಮನೋಹರವಾದ ಸ್ತ್ರೀಯಂತೆ ಕಾಣಿಸುವುದು !

ಕಂದ ॥ ಚಂದಳಿರ್ಗಳಿಬಾಯ್ದೆರೆಯಾ
ನಂದದೆಕುಸುಮದೊಳೆಚರಿಪ ಭೃಂಗವೆ ಕುರುಳ್ಗಳ್॥
ಚಂದದ ಪಿಕರುತಿ ಗಾನಂ
ಸಂದಿರೆ ವನಿತೆಯ ಪ್ರೀತಿಸಪ್ರದೀಸಹ ಕಾರಂ॥ ॥೧೫॥

ವಸಂತಮಿತ್ರ. ಕಾಮುಕರಿಗೆ ಕಾಣಿಸುವ ಪದಾರ್ಥಗಳು ಸ್ತ್ರೀಯಂತೆ ಕಾಣಿಸುವುದು ಸಹಜವೇ.

ಸೌಗಂಧಿಕ. ಸಚಿವನೆ, ನಿನ್ನ ಪರಿಹಾಸ್ಯವುಸಾಕು. ಈ ಮಾವಿನ ಮರದ ನೆರಳಿನಲ್ಲಿ ಕುಳಿತು ಸ್ವಲ್ಪ ವಿಶ್ರಮಿಸಿಕೊಳ್ಳೋಣ ಬಾ. (ಅತ್ತಕಡೆ ನೋಡಿ) ಮಿತ್ರನೆ, ಅದೋನೋಡು ಆ ಅಂದವಾದ ಜಿಂಕೆಯು ನನ್ನನ್ನೇ ಹಿಂಬಾಲಿಸಿಕೊಂಡು ಬರುತ್ತಿರುವುದನ್ನು ನೋಡಿದೆಯಾ ! ಆಶ್ರಮದಲ್ಲಿರುವ ಮೃಗಜಾತಿಗಳಲ್ಲಿಯೂ ಸಾಧುಗುಣವಿರುವುದಲ್ಲ !

ಚಾರುಶೀಲೆ. ನಾನೂ ನಿನ್ನನ್ನೇ ಹಾರೈಸಿಕೊಂಡು ಬಂದಿರುವೆನು. ಸಂದೇಹವೇಕೆ ?

ವಸಂತಮಿತ್ರ. ಮಿತ್ರನೆ, ವಿವೇಚನಾಶಕ್ತಿಯಿಲ್ಲದ ಜಿಂಕೆಯಲ್ಲಿ ಸಾಧುಗುಣವಿರುವುದೆಂದು ಹೇಳಿದೆಯಲ್ಲ, ಕಪಟವು ಎಲ್ಲಿರುವುದು ?

ಸೌಗಂಧಿಕ. ದುರಾಶೆಯಿರುವ ಕಡೆಯಲ್ಲಿ ನೆಲೆಯಾಗಿರುವುದು.

ವಸಂತಮಿತ್ರ. ಹಾಗಲ್ಲ; ಯಾವಜಾತಿಯಲ್ಲಿರುವುದೆಂದು ಹೇಳುವೆ?

---

* ರಾಗ—ಕಾಂಬೋದಿ. ರೂಪಕ.

ಪವಮಾನನೆ । ಭುವನೈಕಜೀವನ ॥ ನವಸೌರಭದಿಂ । ತವೆಬೀಸು ಬೀಸು ॥ ಪ ॥ ಚಂದನತರುವಿಂ । ಕುಂದಸುಮಗಳಿಂ ॥ ಮಂದವಾಗಿಬೀಸಿ । ಗಂಧವನೀಡುವೆ ॥೧॥ ತ್ವತ್ಸ್ಪರ್ಶನದಿಂ। ದವನಿಯಪಾಂಥರ ॥ ತವಿಪಾಯಸವ । ತವಕದಿಹರಿಸುವೆ ॥ ೨ ॥ ಮನಕಾನಂದವ । ಬಿನದದೆನೀಡುವ ॥ ವನಜಪರಾಗವ ವಿನಯದೊಳೀಯುವೆ ॥ ೩ ॥

ಸೌಗಂಧಿಕ. ಸ್ತ್ರೀಯರಲ್ಲಿರುವುದೆಂದು ನನ್ನಿಂದ ಹೇಳಿಸಬೇಕೆಂದು ಕೇಳುವಹಾಗೆ ತೋರುತ್ತೆ.

ವಸಂತಮಿತ್ರ. ಸ್ತ್ರೀಯರಲ್ಲಿಯೇ ನೆಲೆಯಾಗಿರುವುದೆಂದು ಖಂಡಿತವಾಗಿಯೂ ಹೇಳು, ಸಂಶಯವೇಕೆ ?

ಚಾರುಶೀಲೆ. ಏನುಮಾಡಲಿ. ಈ ನೀಚನು ರಾಜನಿಗೆ ದುರ್ಬೋಧನೆಯನ್ನು ಮಾಡುತ್ತಾ, ಹೆಂಗಸರನ್ನು ನಂಬಬಾರದೆಂದು ಹೇಳುವುದಕ್ಕೆ ತಕ್ಕಷ್ಟು ಉದಾಹರಣೆಗಳನ್ನು ಕೊಡುತ್ತಿರುವನಲ್ಲದೆ, ನನಗೆ ಅವಕಾಶವನ್ನು ಕೊಡದೆ ಎಡೆ ಬಿಡದಿರುವನು. ಏನುಮಾಡಲಿ, ಒಳ್ಳೇದು ಇನ್ನೂ ಮರೆಯಲ್ಲಿಯೇನಿಂತು ಕೇಳುವೆನು.

ಸೌಗಂಧಿಕ. ಮಿತ್ರನೆ ? ಇಷ್ಟುತಿಳಿವಳಿಕೆಯುಳ್ಳ ನೀನು ಸ್ತ್ರೀಯರು ಕಪಟಿಗಳೆಂದು ತಿಳಿದಿದ್ದರೂ ಮದುವೆಯಾಗಿರುವುದೇಕೆ ?

ಚಾರುಶೀಲೆ. ಈ ನೀಚನು ಏನು ಉತ್ತರಕೊಡುವನೋ ಕೇಳುವೆನು.

ವಸಂತಮಿತ್ರ. ಗಂಡಸರಿಗೆ ಹೆಂಗಸರು ಇರಬೇಕಾದುದು ಸಹಜವಲ್ಲವೇ ?

ಸೌಗಂಧಿಕ. ಅಂತವರ ಸಹವಾಸದಿಂದ ಕೆಡುವುದಿಲ್ಲವೊ ?

ವಸಂತಮಿತ್ರ ನಮಗಿರುವ ವಿವೇಕದಿಂದ ಸ್ವಲ್ಪವಾದರೂ ಸರಿಮಾಡಿಕೊಳ್ಳಬಹುದು. ಆದುದರಿಂದ ಸ್ತ್ರೀಯರನ್ನು ಸಂಪೂರ್ಣವಾಗಿ ನಂಬಬಾರದೆಂದು ಹೇಳಿದೆನಲ್ಲವೆ ?

ಚಾರುಶೀಲೆ. ನಮ್ಮ ಮಹಾರಾಜನು ಸ್ತ್ರೀಪಕ್ಷಪಾತಿಯು. ಒಳ್ಳೇದು ಇವರಿಗೆ ಕಾಣಿಸುವಂತೆ ನಾನು ಈ ಪಾರ್ಶ್ವದಿಂದ ಆ ಪಾರ್ಶ್ವಕ್ಕೆ ಹೋಗುವೆನು. ಮುಂದೇನಾಗುವುದೊ ನೋಡುವೆನು. (ಎದುರ ಭಾಗಕ್ಕೆಹೋಗಿ ಮರೆಯಾಗಿ ನಿಲ್ಲುವಳು.)

ಸೌಗಂಧಿಕ. ಸಚಿವನೆ, ಅತ್ತನೋಡಿದೆಯಾ !

ಕಂದ ॥ ಮಲಯಾನಿಲನೀಪರಿಯಿಂ
ದಲಸದೆ ಬಗೆಬಗೆಯಕುಸುಮ ಗಳನರುಗಂಪಂ ॥
ಸಲವಿಂತುಂಬಿಸಿದೀಕೋ
ಮಲೆಯೆನಿಪಭರಣಿಯುನೆನಗೆತಾಂ ಕಳುಹಿರ್ಪಂ ॥ ॥೧೬ ॥

ವಸಂತಮಿತ್ರ. ಮಿತ್ರನೆ? ನಾವು ಬಂದು ಬಹಳ ಹೊತ್ತಾಯಿತು. ಇದೋ! ನೋಡು ಸೂರ್ಯನು ಮುಳುಗುತ್ತಿರುವನು. ಇತ್ತನೋಡು.

* ಕಂದ ॥ ವಿರಹಿಜನಂಗಳ ಕೊರಲಂ
ಕೊರೆಯಲ್ ಮನಸಿಜನೆ ಕಳುಹಿದಾಚಕ್ರಮೊಮೇಣ್ ॥
ಮೆರೆವಾಪೂರ್ವಾಂಗನೆತಾಂ
ಧರಿಸಿಹಕ್ಕೆಪಿಡಿಯೊನೋಡುಮೂಡುವಶಶಿಯುಂ॥ ॥೧೭॥

ಚಾರುಶೀಲೆ. ಇನ್ನು ನಾನು ಸುಮ್ಮನಿರಬಾರದು. ಪುಷ್ಪವನ್ನು ಕೊಯ್ಯುವನೆವದಿಂದ ಇವರೆದುರಿಗೆ ಹೋಗಿನಿಲ್ಲುವೆನು. ಮುಂದೇನಾಗುವದೋ ನೋಡೋಣ. (ಮುಂದಕ್ಕೆಬಂದು ಲಜ್ಜೆಯನ್ನು ನಟಿಸಿ ಪುಷ್ಪಾಪಚಯಮಾಡುತ್ತ ನಿಂತಿರುವಳು)

ವಸಂತಮಿತ್ರ. ಮಿತ್ರನೆ, ಅತ್ತನೋಡು, ಆ ಮರದಕೊಂಬೆಯು ಅಷ್ಟು ಬಾಗಿರುವುದರಿಂದ, ಎಲ್ಲಾದರೂ ನಮ್ಮ ಸಂಚಾರಕ್ಕೆ ಕುಂದುಂಟುಮಾಡೀತು. ನಡೆ ಮುಂದಕ್ಕಹೋಗೋಣ.

ಸೌಗಂಧಿಕ. ಆ ಮರದಕೊಂಬೆಯು ಅಷ್ಟುಬಾಗಿ ಪ್ರಸರಿಸದಿದ್ದರೆ ನೆರಳುಂಟಾಗಿ ಸೌಖ್ಯವನ್ನು ಕೊಡುವುದೆ?

ಚಾರುಶೀಲೆ. ನೆರಳೆಂಬ ಸೌಖ್ಯವನ್ನುಂಟುಮಾಡುವುದಕ್ಕೆ ನಾನೇ ಆ ಮರದಂತಿರುವಾಗ್ಗೆ ನೀವೆಲ್ಲಿಗೆತಾನೆ ಹೋಗುವಿರಿ! (ರಾಜನ ಶರಗನ್ನು ಪಿಡಿದುಕೊಳ್ಳುವಳು)

ಸೌಗಂಧಿಕ. (ಹಿಂದಿರುಗಿನೋಡಿ) ಸಖನೆ, ಈಕೆಯಾರು?

---

* ರಾಗ—ಸಾವೇರಿ. ಆದಿ.

ಮೂಡುವಚಂದ್ರನ। ನೋಡೆಲೊಸಖನೆ॥ ನಾಡಿಗಚ್ಚರಿಯಾಗಿ। ನೀಡುವಾನಂದವ ॥ ಪ ॥ ತರುಣಿಯುಪಡುವಣ। ಗಿರಿಯನುಸಾರುತೆ ॥ ಬೆರೆದನುತಾನಿಶಾ। ತರುಣಿಯುಳಾಗಲೆ ॥ ೧ ॥ ವನಚಾರಿಯುತಾ। ವನಿತಯರಿಗೆಸುಖ ॥ ವನುಕುದುವೆನೆಂದು। ಬಿನದದೆಕಾಣಿಸಿಕೊಳುವ ॥ ೨ ॥ ಜಡಜಕೋರಕಗ। ಳೆದೆಸೊಳುರಾಜಿಪ ॥ ಸಿಡುಸ್ಸೆದಿಲೆಗಳು। ಬಿಡದರಳಿಹವು ॥ ೩ ॥

ಕಂದ ॥ ಮೃಗದಂತನ್ನಂಭಾವಿಸಿ
ಮೃಗಾಕ್ಷಿನಿಜವದನಕಾಂತಿಬಾಣವತೊಡುತಂ ॥
ಸೊಗಯಿಪ್ಪಮೋಹಪಾಶದಿ
ಬಿಗಿಯುತ್ತರಾಜಿಪ್ಪಳಾಹಶಬರಿಯತೆರದಿಂ ॥ ॥೧೮॥

ಚಾರುಶೀಲೆ. ಈಗ ನನ್ನಮನೋರಥವು ಕೈಗೂಡುವಂತೆ ತೋರುವುದು. ಈಗ ನನ್ನ ಚಮತ್ಕಾರವನ್ನುಪಯೋಗಿಸುವೆನು. (ಅವರೆದುರಿಗೆ ದೂರದಲ್ಲಿ ನಿಂತು ಸುಮ್ಮನೆ ಕೈಬೀಸಿ ಕರೆಯುವಳು.)

ಸೌಗಂಧಿಕ. ಮಿತ್ರನೆ? ಆ ನಾರೀರತ್ನವು ನಿನ್ನನ್ನುನೋಡಿ ಕೈಬೀಸಿ ಕರೆದಳು ಹೋಗಿಕೇಳು, ಆದರೆ ನನ್ನನ್ನುಮಾತ್ರ ಮರೆಯಬೇಡ.

ವಸಂತಮಿತ್ರ. ಸ್ತ್ರೀಗೆ ಮರುಳಾದ ನಿನ್ನನ್ನಲ್ಲದೆ ನನ್ನನ್ನು ಕರೆಯುವಳೆ? ಕಾಗೆಯು ಬೇವಿನಮರದ ಮೇಲಲ್ಲದೆ ಮತ್ತೆಲ್ಲಿಹಾಸೆ ಹೋಗಿ ಕೂಡುವುದು!

ಚಾರುಶೀಲೆ. ನಿಮ್ಮಮನಸ್ಸನ್ನು ಸ್ಥಿಮಿತದಲ್ಲಿಟ್ಟುಕೊಂಡು ನನ್ನ ಹತ್ತಿರಕ್ಕೆ ಬರಲು ಹೆದರುವ ನೀವು, ಚಪಲೆಯರೆನಿಸಿರುವ ನಿಮ್ಮ ಹೆಂಡಿರಮನಸ್ಸನ್ನು ನಿಮ್ಮ ವಶಮಾಡಿಕೊಳ್ಳುವರೆಂದು ಯಾವ ನಂಬಿಕೆಯುಂಟು?

ಸೌಗಂಧಿಕ. ಮಿತ್ರನ, ಈ ಅಬಲೆಗೆ ಹೆದರಿಕೊಳ್ಳುತ್ತಾ ನಿನ್ನ ಹೇಡಿತನವನ್ನು ಇಲ್ಲಿಯೂ ತೋರಿಸಬೇಕೆ. ಏನು ಹೇಳುವಳೋ ಹೋಗು ಹೋಗು. (ಮುಂದಕ್ಕೆ ತಳ್ಳುವನು.)

---

ರಾಗ—ತೋಡಿ. ಛಾಪು.

ಆರಿವಳೀ ಸುಕುಮಾರಿ ಪೈಯಾರಿ ॥ಪ॥ ಮಾರನಸತಿಯೊಮುಾ । ರಾರಿಯ ಸತಿಯೊ ॥ ತೋರದೆನಗೆಸಖ । ಗಾರುಗೊಳಿಪಳು ॥ ೧ ॥ ಕ್ಷೋಣಿಯೊಳಿಂತಹ । ಏಣಶಾಬಾಕ್ಷಿಯ ॥ ಕಾಣೆನಿಂದಿಗುಫಣಿ । ವೇಣಿಯುಜಾಣೆಯು ॥ ೨ ॥ ಗಾನವಗೈದರು । ಮೌನದಿನಿಂತಿಹ ॥ ಮಾನಿನಿಯುಳನೋಡು । ಮಾನಸಕೆರಗುವಳ್ ॥೩॥

ವಸಂತಮಿತ್ರ. (ಸ್ವಗತಃ) ಈಗ ಮತ್ತೂ ಚೆನ್ನಾಯಿತು. ಈ ಸ್ತ್ರೀಯು ತನ್ನ ಮೋಹವೆಂಬ ಬಲೆಯನ್ನು ಬೀಸಿ, ಓರೆನೋಟ ವೆಂಬ ಬಾಣದಿಂದ ನಮ್ಮ ಮಹಾರಾಜನನ್ನು ಹೊಡೆಯುತ್ತಿರು ವಳು. ಒಳ್ಳೇದು ಇವಳು ಏನುಹೇಳುವಳೊ ಹೋಗಿ ಕೇಳುವೆನು. (೨-೩ ಹೆಜ್ಜೆ ಮುಂದಿಡುವನು.)

ಚಾರುಶೀಲೆ. (ಸ್ವಗತಃ) ಇವರಿಬ್ಬರಿಗೂ ಪರಸ್ಪರ ವೈರವನ್ನು ತಂದುಹಾಕುವುದಕ್ಕೆ ಇದೇಸಮಯ. (ಸಚಿವನನ್ನು ನೋಡಿ) ಅಯ್ಯೊ, ನಿನ್ನನ್ನೇ ಕರೆದೆನಲ್ಲವೆ ! ಬಾ ಯೋಚನೆ ಏಕೆ ?

ಸೌಗಂಧಿಕ. ಮಿತ್ರನೆ, ಈಗಲಾದರೂ ಕೇಳಿದೆಯಾ? ನಿನ್ನನ್ನೇ ಕರೆದಳು. ಹೋಗಿ ವಿಚಾರಿಸು.

ವಸಂತಮಿತ್ರ. (ಕೋಪದಿಂದ ಹತ್ತಿರಕ್ಕೆಬಂದು) ಸ್ತ್ರೀಯೆ, ನನ್ನನ್ನು ಕರೆದುದು ಏಕೆ, ಬೇಗಹೇಳು ?

ಚಾರುಶೀಲೆ. ನಿಮ್ಮ ಕೋಪವನ್ನು ಸಹಿಸಲು ಅಬಲೆಯಾದ ನನಗೆ ಸಾಧ್ಯವೆ? ಒಂದು ಗೋಪ್ಯವಾದ ವಿಷಯವನ್ನು ಹೇಳಬೇಕೆಂದು ಕರೆದೆನೆ ಹೊರತು ಮತ್ತೆಬೇರೆಯಲ್ಲ. ಆದರೆ ಒಬ್ಬರ ಸಂಗಡಲೂ ಹೇಳುವುದಿಲ್ಲವೆಂದು ಪ್ರಮಾಣಮಾಡಿಕೊಟ್ಟರೆ ಹೇಳುವೆನು.

ವಸಂತಮಿತ್ರ. (ಮರೆಯಲ್ಲಿ) ಒಂದುವೇಳೆ ನಮ್ಮ ರಾಜನ ವಿಷಯ ವನ್ನೇನಾದರೂ ಕೇಳುವಳೊ ?

ಸೌಗಂಧಿಕ ಸಚಿವನೆ, ಇದ್ದರೂ ಇರಬಹುದು. ಜಾಗ್ರತೆಯಾಗಿ ಕೇಳು.

ಕಂದ ॥ ತರುಣಿಯತನುಲತೆಯೊಳ್ಕು
ಳ್ಳಿರುತಿಹ ಗುರುಕುಚ ರಥಾಂಗಯುಗಳಂ ಭಯದಿಂ ॥
ನೆರೆಹಾರಿಪೋಗದಂತೀ
ಕರಪಂಜರ ವೊಡ್ಡುತ್ತೈದೆ ಸಂತಸವಡುವೆಂ ॥ ॥ ೧೯ ॥

ಚಾರುಶೀಲೆ. ಪ್ರಮಾಣಮಾಡಿಕೊಟ್ಟರೆ ಹೇಳುವೆನು.

ವಸಂತಮಿತ್ರ. ಒಳ್ಳೇದು ಬೇಗಹೇಳು.

ಚಾರುಶೀಲೆ. (ಸಗತಃ) ಜಯಧ್ವಜನನ್ನು ಸ್ಥಾಪಿಸಲು ಅಸ್ತಿಭಾರ

ವನ್ನು ಚೆನ್ನಾಗಿಹಾಕಿರುವೆನು. (ವಸಂತಮಿತ್ರನ ಕಿವಿಯಲ್ಲಿ „ಇದನ್ನು ಯಾರೊಡನೆಯೂ ಹೇಳಬೇಡ" ಎಂದು ಹೇಳಿದಳು. )

ವಸಂತಮಿತ್ರ. ಏನು ಹೇಳಿದೆ? ಏನೋ ಉತ್ಕೃಷ್ಟವಾದ ವಿಷಯ ವನ್ನು ಹೇಳುವಳೆಂದು ಕಿವಿಗೊಟ್ಟುದುದಕ್ಕೆ ಇಂತಹ ಮಾತುಗಳನ್ನಾ ಡುವುದೆ? ಪ್ರಮಾಣವನ್ನು ಮಾಡಿಸಿಕೊಂಡು ಯಾರೊಡನೆಯೂ ಹೇಳಬೇಡವೆಂದು,ಹೇಳಿದೆಯಾ? ಗೋಪ್ಯವಾಗಿ ನೀನು ಮಾತನಾಡಿ ದುದನ್ನು ನಮ್ಮ ರಾಜನು ನೋಡುತ್ತಲೇ ಇದ್ದನಲ್ಲ. ನೀನು ಹೇಳಿದ ಮಾತುಗಳನ್ನು ಹೇಳಿದರೆ ನನ್ನ ಮಿತ್ರನು ನಂಬುವನೆ ? ಏನುಮಾ ಡಲಿ. (ಭ್ರಾಂತನಾಗಿ ನಿಂತಿರುವನು.)

ಸೌಗಂಧಿಕ. ಮಿತ್ರನೆ? ಇಲ್ಲಿಬಾ. ಇವಳು ಹೇಳಿದಮಾತಿಗೆ ಇಷ್ಟುಕೋಪವೆ? ಆಡಿದ ಗುಟ್ಟೆನಮಾತೇನು ?

ವಸಂತಮಿತ್ರ. ಮಹಾರಾಜನಿಗೆ ಈಗ ಏನೆಂದುಹೇಳಲಿ. ಆರ್ಯನೆ, ಯಾರೊಡನೆಯೂ ಹೇಳಬೇಡವೆಂದು ಹೇಳಿದಳು.

ಸೌಗಂಧಿಕ. ನನ್ನೊಡನೆಯೂ?

ವಸಂತಮಿತ್ರ. ಇವಳು ನನಗೆ ಯಾವದನ್ನೂ ಹೇಳಲಿಲ್ಲ.

ಸೌಗಂಧಿಕ. ಮಿತ್ರನೆ, ಮೊದಲು ಈಕೆಗೆ ಭಾಷೆಕೊಟ್ಟು, ಹೆದರಿ ಪರಮಾಪ್ತನಾದ ನನ್ನೊಡನೆಯೂ ಸುಳ್ಳಾಡುವುದೆ? ಉಭಯತ್ರರೂ ಒಂದೇಸ್ಥಳದಲ್ಲಿ ಬಳೆದು, ಎಡೆಬಿಡದೆ ಆಟವಾಡಿ ಜೊತೆಯಲ್ಲಿಯೇ ಭೋಜನಮಾಡಿ ಅಶ್ವಿನೀದೇವತೆಗಳಂತಿದ್ದೆವು. ನನ್ನಲ್ಲಿಯೂ ವಂಚನೆ ಯೇ, ನಿನ್ನ ಬುದ್ಧಿಯು ಹೀಗಾಗಬಹುದೆ?

ಚಾರುಶೀಲೆ. ಅಯ್ಯಾ, ಗೋಪ್ಯವಾಗಿ ಹೇಳಿದುದನ್ನು ನಮ್ಮ ರಾಜ ನೊಡನೆಯೂ ಹೇಳಬೇಡ. ಏನುಮಾಡುವನೊ ನೋಡೋಣ.

ಸೌಗಂಧಿಕ. ಈಕೆಯು ಹೇಳಿದಂತೆಯೇ ನನ್ನ ಮಿತ್ರನೂ ಹೇಳು ವುದಿಲ್ಲವಲ್ಲ! ಇದರಲ್ಲಿ ಏನೋ ಒಂದು ಸ್ವಾರಸ್ಯವಿದೆ. ಪ್ರಪಂಚ ದಲ್ಲಿ ಸ್ನೇಹಕ್ಕಿಂತ ಹೆಚ್ಚಾದುದು ಯಾವದೂಇಲ್ಲ. ಸ್ನೇಹವೆಂಬ ಚಿನ್ನವನ್ನು ಕಷ್ಟವೆಂಬ ಒರೆಗಲ್ಲಿನಲ್ಲಿ ತೇದು ಪರೀಕ್ಷೆಮಾಡಬಹು ದಾಗಿದೆ. ಪರಮಾಪ್ತನಾದ ನನ್ನೊಡನೆಯೂ ಸುಳ್ಳಾಡಬಹುದೆ ?

ಚಾರುಶೀಲೆ. ಸಚಿವನೆ, ಪ್ರಮಾಣಕ್ಕೆತಪ್ಪಿ ನಡೆಯುವವರು ಸತ್ಪುರುಷರೆ ?

ವಸಂತಮಿತ್ರ. ಆರ್ಯನೆ, ಪ್ರಮಾಣವಾಡಿ ಹೇಳುವೆನು. ನನಗೆ ಏನೂ ಹೇಳಲಿಲ್ಲ. ಚಿಂತೆಮಾಡಿ ಪ್ರಯೋಜನವಿಲ್ಲ. ಈ ನೀಚಳ ಮುಖಾವಲೋಕನವು ಇನ್ನೂ ಕ್ರೋಧಕ್ಕೆ ದಾರಿಕೊಡುವುದು.

ಚಾರುಶೀಲೆ. ನನ್ನ ಮನೋರಥವು ಕೈ ಗೂಡುತ್ತಾಬರುವದು.

ಸೌಗಂಧಿಕ. ಇದರಲ್ಲಿಯೇ ಇಷ್ಟುಮೋಸಮಾಡಿರುವಾಗ್ಗೆ, ರಾಜ್ಯಭಾರದವಿಷಯದಲ್ಲಿ ಎಷ್ಟುಮೋಸ ಮಾಡಿರುವಿಯೊ ನನಗೆ ತಿಳಿಯದು.

ವಸಂತಮಿತ್ರ. ಮಿತ್ರನೆ, ಕೋಪಿಸಬೇಡ. ನಿನಗೆ ಬುದ್ಧಿಹೇಳುತ್ತಿದ್ದವನೇ ಕೊನೆಗೆ ಮೋಸಹೋಗಿ ನಿನ್ನ ಅವಮಾನದ ಮಾತುಗಳು ಕೇಳಿದರೂ ಚಿಂತೆಯಿಲ್ಲ. ಆದರೆ ನಾನು ಹೇಳಿದುದನ್ನು ಮಾತ್ರ ಎಂದಿಗೂ ಮರೆಯಬೇಡ.

ಸೌಗಂಧಿಕ. ಸ್ತ್ರೀಯರಿಗೆ ಮರುಳಾಗಿ ಮಿತ್ರದ್ರೋಹಮಾಡುವುದನ್ನು ಜ್ಞಾಪಕದಲ್ಲಿಡಬೇಕೊ! ಛೀ ನೀಚನೆ, ಯಾರಲ್ಲಿ? (ಕೆಲವು ವನಪಾಲಕರು ಬಂದು ನಿಂತಿರುವರು) ಸೇವಕರಿರಾ! ಈ ನೀಚನು ಮಿತ್ರದ್ರೋಹಿಯಾದುದರಿಂದ ನಮ್ಮ ಪಟ್ಟಣದಿಂದಾಚೆಗೆ ತಳ್ಳಿಬಿಡಿ. (ವನಪಾಲಕರು ವಸಂತಮಿತ್ರನನ್ನು ಸೆಳೆಯುವರು.)

ವಸಂತಮಿತ್ರ. ಅಯ್ಯೊ, ನೀಚಸ್ತ್ರೀಯೆ, ಏನುಮರುಳಾಗಿ ನಿನಗೆ ಕಿವಿಗೊಟ್ಟೆನೊ ತಿಳಿಯಲಿಲ್ಲವಲ್ಲ.

ಚಾರುಶೀಲೆ. ಅಯ್ಯಾ, ಇಂತಹಕಾಲದಲ್ಲಿಯೂ ನಾನು ಗೋಪ್ಯವಾಗಿ ಹೇಳಿದುದನ್ನು ಎಂದೆಂದಿಗೂ ರಾಜನೊಡನೆ ಹೇಳಬೇಡ.

(ವನಪಾಲಕರು ವಸಂತಮಿತ್ರನನ್ನು ಸೆಳೆದುಕೊಂಡೇ ಹೋಗುವರು.)

---

ರಾಗ—ಭೈರವ. ರೂಪಕ.

ವಿಧಿಯೇಕೀಪರಿ ಗೈದೆಯೊ । ಹದನೇನುತೋರದು ಮುಂದಕೆ ॥ ಪ ॥
ಕಂತುಸಮರೂಪನ । ಇಂತಗಲುತೆನೀ । ಚಿಂತೆಗೆಗುರಿಗೈದೆಯಾ ॥ ೧ ॥ ನಿನ್ನ
ಯಾಣತಿಯನು । ಮುನ್ನದಾರ್ಕೀರ್ವರು । ಬನ್ನವನೆಂತುಸೈಸಲೀ ॥ ೨ ॥

ಚಾರುಶೀಲೆ. ಈಗ ಧನ್ಯಳಾದೆನು. ಆ ಪಿಶಾಚಿಯು ತೊಲಗಿತು. ರಾಜನು ಸ್ಥಿರಚಿತ್ತನಾದಂತಿದೆ. ಅಂತವನನ್ನೇ ಆರೀತಿ ಮಾಡಿಸಿದ ಮೇಲೆ ನನ್ನ ಪ್ರಿಯನನ್ನು ನನ್ನ ವಶಮಾಡಿಕೊಳ್ಳುವುದು ಒಂದು ದೊಡ್ಡ ಕಾರ್ಯವೆ! ನನ್ನ ಹಾವಭಾವವಿಲಾಸಗಳಿಂದ ಅವನನ್ನು ಮರುಳು ಗೊಳಿಸಿ ನನ್ನ ಕೋರಿಕೆಯನ್ನು ನೆರವೇರಿಸಿಕೊಳ್ಳುವೆನು. (ಹತ್ತಿರಕ್ಕೆ ಹೋಗಿ) ಸುಂದರನೆ? ದೀನಳಾದ ನನ್ನ ಮನೋರಥವನ್ನು ನೆರವೇರಿ ಸಿಕೊಡಬೇಕು.

ಸೌಗಂಧಿಕ. ನಿನ್ನ ಮನೋರಥವೇನು?

ಚಾರುಶೀಲೆ.

ಕಂದ ॥ ಮೀಸಲ್ತಾನೆಂದೆನಿಸಿವಿ
ಕಾಸಿಸುತಿರ್ಪೆನ್ನ ಜೌಂವನಂ ನಿನ್ನನದೇಂ ॥
ಆಶಿಸಿತೊಕಾಣೆನಾಂ ಪ್ರಾ
ಣೇಶನೆ ನಿನ್ನಂಗಸಂಗಮಂ ಕುಡುನಲವಿಂ॥ ॥ ೨೦ ॥

ಸೌಗಂಧಿಕ. ಗುಟ್ಟಿನ ಮಾತುಗಳನ್ನು ನನ್ನ ಮಿತ್ರನ ಕಿವಿಯಲ್ಲಿ ಹೇಳಿ ನನಗೂ, ಆತನಿಗೂ ದ್ವೇಷವನ್ನುಂಟುಮಾಡಿ ಅಗಲಿಸಿರುವ ನಿನ್ನ ಮುಖಾವಲೋಕವು ಅತ್ಯಂತ ಘೋರವಾದದು ನಡೆ.

ಚಾರುಶೀಲೆ. ( ರಾಜನ ಶರಗನ್ನು ಹಿಡಿದುಕೊಂಡು )

ಸೌಗಂಧಿಕ. ಸುಮ್ಮನೆ ಪೀಡಿಸಬೇಡ. ನೀನು ಪಾಪಿ, ದ್ರೋಹಿ.

ಚಾರುಶೀಲೆ. ಚಕೋರಪಕ್ಷಿಯು ಚಂದ್ರೋದಯವನ್ನು ಬಯಸು ವಂತೆ, ನಾನು ನಿನ್ನ ಸಮಾಗಮಕ್ಕೆ ಬಯಸುತ್ತಿರುವೆನು. ಹೀಗೆ ಧಿಕ್ಕರಿಸಿದರೆ ಬಿಟ್ಟು ಹೋಗುವೆನೆ?

---

ರಾಗ—ತೋಡಿ. ಛಾಪು.

ಮುನಿಸೇತಕೆನ್ನೊಳು । ಪ್ರಿಯ ॥ ವನಜಾತನೇತ್ರ ಚಾರುಗಾತ್ರ ॥ ಪ ॥ ಸದಯಾತ್ಮನೆ । ಪನೆದೀಕ್ಷಿಸಿ । ಮುದದಿಂದ ಮಾತುಗಳಾಡದೆ ॥ ಮದದಿಂದ ಪೋಪುದೇನು ಪ್ರಿಯ ॥ ೧ ॥ ತನುಬೇರೆಜೀ । ವನವೇಕವು । ಅನುರಾಗದಿಂದಲಿ ಬೇಡುವೆ । ಮನಸಾರನೋಡಿಕೂಡುಪ್ರಿಯ ॥ ೨ ॥ ಕಡುನಲ್ಮೆಯಿಂ । ದೊಡ ನಾಡದೆ । ನಿಡುಸುಯ್ದುಪೋಪುದೇನಚ್ಚರಿ ॥ ಬಡಿವಾರವೇಕೆಪ್ರಾಣನಾಥ ॥೩॥

ಸೌಗಂಧಿಕ. ಎಲೆ ನೀಚಸ್ತ್ರೀಯೆ,

ಕಂದ ॥ ಪುಸಿಮೋಸಜಾಣ್ಮೆಗಳ್ಗಿ
ರಸೆಯೊಳ್ ಸ್ತ್ರೀಜನವೆಸಲೆತವರ್ಮುನೆಯೆನಿಕುಂ ॥
ನಿಸದಂಮೋಸದಸೌಖ್ಯ
ಕ್ಕಸುವಂತೆ ರುತಿರ್ಪ್ಪರವರ್ಗೆಕಾಮಿಗಳೊಲವಿಂ ॥ ॥ ೨೧ ॥

ಮಿತ್ರನನ್ನು ಅಗಲಿದ ದುಃಖದಿಂದಿರುವವನೊಡನೆ ಮಾತನಾಡ ಬೇಡ. ಹೊರಟುಹೋಗು. ( ಕೋಪದಿಂದಹೊರಟು ಹೋಗುವನು )

ಚಾರುಶೀಲೆ. ಈಗ ಏನುಮಾನೆ ಮಾಡಲಿ? ಅಯ್ಯೋ, ವಿಧಿಯೆ!

ಕಂದ ॥ ಆರಸಂಗಾಂಪಗೆಯಾಗುತೆ
ಧರೆಯೊಳ್ ಸುಖವಿನಿತುಮಿಲ್ಲದೀ ಬಡತನದಿಂ ॥
ಕೊರಗುತೆ ಪಳಿಗೀಡಾಗುತೆ
ಧರಿಸಿರಲೀ ತನುವನೇಂ ಫಲಂ ಸಮನಿಪುದೋ ॥ ॥ ೨೨ ॥
(ಮೂರ್ಛಾಕ್ರಾಂತಳಾಗಿ ಬೀಳುವಳು.)

ಹಂಸಗಮನೆ (ಪ್ರವೇಶಿಸಿ) ನಾನು ಮರೆಯಲ್ಲಿ ನಿಂತು ನೋಡಿ ದೆನು. ಎಂತಹ ಮಿತ್ರರು ಅಗಲಿದರಲ್ಲ! ಈಕೆಯ ಮನೋರಥವು ನೆರವೇರಲಿಲ್ಲ. ಆಸೆಯು ಬಹಳ ಕೆಟ್ಟದ್ದು. ಆಶಾಪೂರ್ತಿಯನ್ನು ಮಾಡಿಕೊಳ್ಳಬೇಕೆಂದು ಪ್ರಯತ್ನಪಟ್ಟರೆ ತಮ್ಮ ಸೌಖ್ಯವೇ ಹಾಳಾಗು ವುದಲ್ಲದೆ, ಇತರರನ್ನೂ ಹಾಳುಮಾಡುವುದು. ಆದರೆ ರಾಜನು ಜೀವದಿಂದ ತಪ್ಪಿಸಿಕೊಂಡು ಹೋದುದಕ್ಕೆ ಬಹಳ ಸಂತೋಷಪಡ ಬೇಕಾಗಿದೆ. ಒಳ್ಳೇದು, ಈಕೆಯನ್ನು ಎಬ್ಬಿಸುವೆನು. (ಹತ್ತಿರಕ್ಕೆಹೋಗಿ) ಸಖಿ, ಇದೇನು, ಹೀಗೆ ಪ್ರಲಾಪಿಸುವುದು ಯೋಗ್ಯವೆ? ಏಳು, ಏಳು. (ಸಂತೈಸುವಳು)

ರಾಗ—ಖರಹರಪ್ರಿಯ. ಆದಿ.

ಸೈರಿಸಲಾರೆನು । ಮೀರಿದದುಃಖವ ॥ ಕ್ರೂರಮಾರನುಯನ್ನ । ಘೋರ ಪಡಿಪಮುನ್ನ ॥ ಪ ॥ ಹಿತ್ರದೊಳಾತನಸೇವಾ । ರತಳಾಗಬೇಕೆಂದಿರೆ ॥ ಅತಿ ಶಯದಳಲಾಂತೆ । ಗತಿತೋರದಿಂತಾದೆ ॥ ೧ ॥ ಧರೆಯೊಳಗೆನಾಂ । ತರುಣಿ ಯಾಗುದಿಸಿ ॥ ಪಿರಿದಹದುಃಖದ । ಶರಧಿಯೊಳ್ಮುಳುಗಿರೆ ॥ ೨ ॥

ಚಾರುಶೀಲೆ. ಸಖಿ, ನಾನು ಜೀವಿಸಿ ಫಲವಿಲ್ಲ.

ಹಂಸಗಮನೆ. ಇದೇನು! ಹೀಗೆಹೇಳುವೆ !!

ಚಾರುಶೀಲೆ. ಮಹಾರಾಜನಿಗೋಸ್ಕರ ನನ್ನಪ್ರಾಣವನ್ನು ಕಾಪಾಡಿ ಕೊಂಡಿದ್ದೆನು. ನಾನುಮಾಡಿದ ಚಮತ್ಕಾರವೇ ನನ್ನನ್ನು ಹೀಗೆ ಮಾಡಿತು.

ಹಂಸಗಮನೆ. ಸಖಿ, ರಾಜನೆಲ್ಲಿ, ನೀನೆಲ್ಲಿ; ಅಸಾಧ್ಯಕಾರ್ಯಕ್ಕೆ ಇದೇಫಲ. ಮನೆಗೆಹೋಗಿ ಮುಂದಕ್ಕೆ ಯೋಚಿಸೋಣ ಬಾ.

(ಇಬ್ಬರೂ ಹೋಗುವರು)

---

ಸ್ಥಾನ ೩. ಅರಣ್ಯ.

ವಸಂತಮಿತ್ರನು ರಾಜ್ಯಭ್ರಷ್ಟನಾಗಿ ಪ್ರವೇಶಿಸುವನು.

ವಸಂತ್ರಮಿತ್ರ. ನಾನು ಎಂತಹದುರ್ದೆಶೆಗೆ ಗುರಿಯಾದೆ. ರಾಜನಿಂದ ಧಿಕ್ಕೃತನಾಗಿ ರಾಜ್ಯಭ್ರಷ್ಟನಾಗಿರುವೆನು. ಆ ನೀಚಳು ನನ್ನ ಕಿವಿಯಲ್ಲಿ "ಇದನ್ನು ಯಾರೊಡನೆಯೂ ಹೇಳಬೇಡ" ಎಂದು ಹೇಳಿದಳೇ ಹೊರತು ಮತ್ತೇನೂಹೇಳಲಿಲ್ಲ. ನನ್ನಸ್ಥಿತಿಗೆ ವ್ಯಸನಪಡುವುದಿಲ್ಲ. ಆದರೆ ಮಿತ್ರನು ಅವಳದೆಶೆಯಿಂದ ಮತ್ತಾವವಿಪತ್ತಿಗೆ ಗುರಿಯಾಗಿರುವನೊ ಎಂದು ಯೋಚನೆಯಾಗಿದೆ. ದೈವಾಜ್ಞೆಯಂತೆ ನಡೆವುದು. ರಾಜ್ಯ ಭ್ರಷ್ಟನಾದುದರಿಂದ ಎಲ್ಲಾ ಕಡೆಯಲ್ಲಿಯೂ ತಿರುಗಿ ತಿರುಗಿ ದೇಹವು ಬೆಂಡಾಗಿರುವುದಲ್ಲ. ನಿಬಿಡವಾಗಿ ಬೆಳೆದಿರುವ ಮರಗಳಿಂದ ಕಗ್ಗತ್ತಲೆ ಯಾಗಿರುವುದನ್ನು ಯೋಚಿಸಿದರೆ,

ಕಂದ ॥ ದಿನಮಣಿತಾಂ ಪಗಲೊಳಗಬಿಡ
ದನುರಾಗದೆ ಪುಷ್ಕಿಣಿಯೊಳೆಬೆರೆದುದರಿಂದಂ ॥
ಜನಿಸಿದಪಖ್ಯಾತಿಯೆದಲ್
ಘನತಿಮಿರಮಿದೆಂಬಶಂಕೆಯಿಂಪುಟ್ಟಿಸುಗುಂ ॥ ॥ ೨೩ ॥

---

ರಾಗ—ತೋಡಿ. ರೂಪಕ

ಅಪರಾಧಿಯೆಂದುಪೇಳ್ದನೆ । ಸಖಿ ॥ ಪ ॥ ಚಪಲೆಯಮಾತಿನ । ಗುಪಿತ ವನರಿಯದೆ । ಕುಪಿತನಾಗುತಪೋದನು । ಸಖಿ ॥ ೧ ॥ ವರಮಿತ್ರನೆಲ್ಲಿಗೆ। ತೆರಳಿದನೊಕಾಣೆ । ಅರಸುತೀಪರಿಪೋಪೆನಾ ॥ ೨ ॥ ಕಂತುಸಮರೂಪನ । ಇಂತ ಗಲುತೆನಾ । ಚಿಂತೆಯನೆಂತುಸಹಿಸಲಿ। ಸಖಿ ॥ ೩ ॥

ಹಸಿವುತೃಷೆಗಳೆಂಬ ಶತ್ರುಗಳು ಬಾಧಿಸುತ್ತಿರುವವಲ್ಲ.

ಕಂದ ॥ ಅಡಿಯಿಡಲೆನಗೆಡೆತೋರದು
ಕಡುದುಗುಡಂಮೇಲೆಮೇಲೆಮನಕಾವರಿಕುಂ ॥
ಜಡಜಾಸನನೇದುರ್ಮತಿ
ಗಡಲೊಡವಿಯೊಳೆನ್ನ ನಿಂತುಬಿಡದಳಲಿಸುವಂ ॥ ॥೨೪॥

ಆತ್ಮಹತ್ಯವನ್ನು ಮಾಡಿಕೊಂಡರೇನು. ಆಹಾ! ಇದು ದೊಡ್ಡ ತಪ್ಪು. ಮಿತ್ರಯೋಗಹೊಂದಿದ ನೀಚನೆ ಸಾಯಿ.

(ಎಂದು ಮೂರ್ಛೆಗತನಾದನು.)

(ಗಾಲವನ ಪ್ರವೇಶ.)

ಗಾಲವ. (ಸ್ವಗತಃ) ಎಂದಿನಂತೆ ನಮ್ಮ ಗುರುಗಳ ದೇವತಾರ್ಚನೆಗೆ ಪುಷ್ಪಗಳನ್ನು ತೆಗೆದುಕೊಂಡು ಹೋಗುವುದಕ್ಕೆ ಬಂದಿರುವೆನು. (ಅತ್ತಿತ್ತನೋಡಿ) ಅದೇನು ಅಲ್ಲಿ ಬಿದ್ದಿರುವುದು. ( ಹತ್ತಿರಕ್ಕೆ ಹೋಗಿ ) ಈತನು ಸುಂದರ, ಯೌವ್ವನಸ್ಥ, ವ್ಯಸನದಿಂದ ಮೂರ್ಛಿತನಾಗಿರುವಂತಿದೆ. ಕಾರಣವೇನೊ ತಿಳಿಯಲಿಲ್ಲವಲ್ಲ. ಒಳ್ಳೇದು, ಎಬ್ಬಿಸಿ ವೃತ್ತಾಂತವನ್ನು ವಿಚಾರಿಸುವೆನು. ಅಯ್ಯ, ಮಾರ್ಗಸ್ಥನೆ. ಏಳು, ಏಳು.

ವಸಂತಮಿತ್ರ. (ಸ್ವಲ್ಪಚೇತರಿಸಿಕೊಂಡು) ಮಹಾತ್ಮರೆ, ಪಾಪಿ, ದ್ರೋಹಿಯಾಗಿರುವ ನನ್ನನ್ನು ಮುಟ್ಟಬೇಡಿ, ದೂರದಲ್ಲಿ ನಿಲ್ಲಿ.

ಗಾಲವ. ದುಃಖಪಡುವುದೇತಕೆ?

ವಸಂತಮಿತ್ರ. ಪೂಜ್ಯರೆ? ಒಬ್ಬ ಸ್ತ್ರೀಯಿಂದುಂಟಾದ ಮಿತ್ರನ ವಿಯೋಗವೇ ದುಃಖಕ್ಕೆಕಾರಣ. ಮುಂದಕ್ಕೆ ಹೇಳಲಾರೆನು ಕ್ಷಮಿಸಿ.

ಗಾಲವ. ಆಹಾ! ಕಷ್ಟಕಷ್ಟ. ಸ್ತ್ರೀಯಿಂದ ಕೇಡುಂಟೆಂದು ತಿಳಿದು, ಸಂಸಾರವು ನೀರಸವೆಂದು ಭಾವಿಸಿ, ತ್ಯಜಿಸಿ ಈ ಅರಣ್ಯದಲ್ಲಿ ಪರಮಾತ್ಮನನ್ನು ಧ್ಯಾನಿಸಿ ನಿಶ್ಚಂಚಲಚಿತ್ತನಾಗಿರುವೆನು.

ವಸಂತಮಿತ್ರ. ಮಹಾತ್ಮರೆ? ನಾನು ತಮ್ಮ ಶಿಷ್ಯನಾಗಿರಬೇಕೆಂಬ ಕುತೂಹಲವು ಉಂಟಾಗಿದೆ. ಆದುದರಿಂದ ದಯವಿಟ್ಟು ಪರಿಗ್ರಹಿಸಬೇಕೆಂದು ಬೇಡುವೆನು.

ಗಾಲವ. ನಾನು ನಮ್ಮ ಗುರುಗಳಿಗೆ ಶಿಷ್ಯ. ನೀನು ನನ್ನ ಶಿಷ್ಯನಾಗುವುದೆಂದರೇನು. ಇದು ಸರಿಯಾದುದಲ್ಲ.

ವಸಂತಮಿತ್ರ. ಕಷ್ಟಪಡುವವರನ್ನು ಕಾಪಾಡುವುದು ಸಹಜವೆಂದು ತಿಳಿದಿದ್ದಪಕ್ಷದಲ್ಲಿ ತಮ್ಮಚಿತ್ತ. ನಾನು ಹೇಳಲಾರೆ.

ಗಾಲವ. (ಸ್ವಗತಃ) ಏನುಮಾಡಲಿ. ನಾನು ಎಲ್ಲಿಗೆಹೋದರೂ ಒಂದೊಂದು ನಿರ್ಬಂಧವೇ ಪ್ರಾಪ್ತವಾಗುತ್ತಿರುವುದಲ್ಲ. ಈತನಿಗೆ ಹಣದಿಂದ ಸಹಾಯಮಾಡೋಣವೆಂದರೆ ನನ್ನ ಸ್ಥಿತಿಯೇ ಬೇರೆ. ಅಯ್ಯಾ, ಹತ್ತಿರದಲ್ಲಿಯೇ ನಮ್ಮ ಗುರುಗಳಾದ ಮಾಂಡವ್ಯಮುಷಿಗಳು ಇರುವರು. ನನ್ನೊಡನೆ ಬಂದುದಾದರೆ ಅವರನ್ನು ತೋರಿಸುವೆನು. ಬಂದುವೇಳೆ ನಿನ್ನದುಃಖವು ಅವರಿಂದ ಪರಿಹಾರವಾದೀತು. ಬರುವೆಯಾ ಹೋಗೋಣ?

ವಸಂತಮಿತ್ರ. ಸ್ವಾಮಿ, ಸಿದ್ಧನಾಗಿರುವೆನು.

(ಇಬ್ಬರೂಹೊರಡುವರು.)

---

ಸ್ಥಾನ ೪. ಆಶ್ರಮ.

ಮಾಂಡವ್ಯಮುಷಿಗಳು ಧ್ಯಾನಮಾಡುತ್ತಾ ಕೂತಿರುವರು.

(ಗಾಲವ ಮತ್ತು ವಸಂತಮಿತ್ರನು ಪ್ರವೇಶಿಸುವರು.)

ಗಾಲವ. ಸುಕುಮಾರನೆ, ಇಲ್ಲಿಗೆ ಬಾ. ಇದೋ ನಮ್ಮ ಗುರುಗಳು ಧ್ಯಾನಚಿತ್ತರಾಗಿರುವರು. ನಿನ್ನೊಡನಿದ್ದರೆ ಗುರುಗಳು ಕೋಪಿಸಿಕೊಳ್ಳುವರು. ಇನ್ನು ನಾನು ಹೋಗುವೆನು. (ಹೋಗುವನು.)

ವಸಂತಮಿತ್ರ. ಈ ಆಶ್ರಮವಾದರೊ,

ಕಂದ ॥ ನಳನಳಿಸಿ ಬೆಳೆದ ನಳಿನಂ
ಗಳಬಂಡಂಸವಿವ ಮಧುಪ ಕುಲದಿಂದೆಲರಿಂ॥
ಗಿಳಿಗಳ ಕಳಕಳ ರವದಿಂ
ಪೊಳೆಯುತ್ತಂ ಮುದವನಿತ್ತು ಸೆಳೆವುದು ಮನವಂ॥ ॥೨೫॥

ಈ ಮಹಾತ್ಮರನ್ನು ನೋಡಿ ಕೃತಾರ್ಥನಾದೆನು. ನನ್ನ ಕಣ್ಣುಗಳು ಪವಿತ್ರವಾದವು. ಈ ಆಶ್ರಮದಲ್ಲಿರುವ ಸಕಲವೂ ಸೌಮ್ಯ

ರೂಪವಾಗಿ ಕಾಣಿಸಿಕೊಳ್ಳುವುದಕ್ಕೆ ಮಹಾತ್ಮರ ತಪ್ಪೋ ಬಲವೇ ಇದಕ್ಕೆ ಕಾರಣವೆಂದು ತೋರುವುದು. ಈ ಮಹಾತ್ಮರನ್ನು ಮೊದಲು ವಿನಯದಿಂದ ಬೇಡುವೆನು. ( ಹತ್ತಿರಕ್ಕೆ ಹೋಗಿ ) *

ಮಾಂಡವ. ( ಕಣ್ಣುಗಳನ್ನು ಬಿಟ್ಟುನೋಡಿ ) ಬಾಲಕನೆ, ನೀನು ಯಾರು. ಇಂತಹಸ್ಥಳಕ್ಕೆ ಒಂಟಿಯಾಗಿ ಬಂದಿರುವುದಕ್ಕೆ ಕಾರಣವೇನು ?

ವಸಂತಮಿತ್ರ. ಒಬ್ಬಹೆಂಗಸು ನನ್ನ ಮಿತ್ರನಿಗೂ, ನನಗೂ ವೈಷಮ್ಯವನ್ನು ಹುಟ್ಟಿಸಿ, ಕೊನೆಗೆ ನನ್ನ ಸ್ನೇಹಿತನಿಂದಲೇ ನನ್ನನ್ನು ರಾಜ್ಯಭ್ರಷ್ಟನನ್ನಾಗಿ ಮಾಡಿಸಿದಳು. ನನ್ನ ಮಿತ್ರನ ಅಗಲಿಕೆಯನ್ನು ಸಹಿಸಲಾರದೆ ಪ್ರಾಣತ್ಯಾಗಮಾಡಿಕೊಳ್ಳಬೇಕೆಂದು ಬರುತ್ತಿರಲು ತಮ್ಮನ್ನು ಅಕಸ್ಮಾತ್ತಾಗಿ ನೋಡಿ ಕೃತಾರ್ಥನಾದೆನು. ಆ ನೀಚಳು ನನ್ನ ಮಿತ್ರನನ್ನು ಯಾವ ವಿಪತ್ತಿಗೆ ಗುರಿಪಡಿಸಿದಳೊ ಎಂಬ ಯೋಚನೆಯು ಮಾತ್ರ ನನಗಿರುವುದು. ನನ್ನ ಸ್ನೇಹಿತನು ಹೇಗಿರುವನು. ಆ ವಿಷಯವನ್ನು ತಮ್ಮ ಜ್ಞಾನದೃಷ್ಟಿಯಿಂದ ತಾವು ಹೇಳುವುದೊಂದಲ್ಲದೆ, ನನ್ನನ್ನು ತಮ್ಮ ಶಿಷ್ಯವರ್ಗದಲ್ಲಿ ಸೇರಿಸಿಕೊಳ್ಳಬೇಕೆಂದು ಬೇಡಿಕೊಳ್ಳುವೆನು.

ಮಾಂಡವ. ಬಾಲಕನೆ, ನಿನಗೆ ಪತ್ನಿ ಇರುವಳೆಂದು ತೋರುವುದು. ಸಂಸಾರಿಯಾದವನು ಇಂತಹ ಯೋಚನೆ ಮಾಡುವುದು ಧರ್ಮವಲ್ಲ.

---

* ರಾಗ -- ತೋಡಿ.                                        ರೂಪಕ.

ಮೌನೀಂದ್ರರನೋಡಿಪಾವನನಾದೆ। ನಾನುರಾಗದಿನಮಿಸುತೋಷಿಸೆ॥ಪ॥ ಪಾವನನಿಗಮವ । ಭಾವದಿನೆನೆಯುತ ॥ ದೇವನಸಂತತಸೇವಿಸುತಿಹ ॥ ೧ ॥ ಕೋವಣವಾನುತೆ । ಭಾವಜಮುಳಿಯುತೆ ॥ ಭಾವಜನಿಪಿನಕೆ । ಪಾವಕರಹ ॥ ೨ ॥ ಅರಿಯುದಕ್ಕರಳನ । ನಿರುಕಿಸುತೆನ್ನಯ ॥ ಅರಿಯುಮೊಯುನು । ಪರಿಹಾರವಮಾಳ್ಪ ॥ ೩ ॥

ವಸಂತಮಿತ್ರ. ಸ್ವಾಮಿ, ಜನನವುಂಟಾದವನಿಗೆ ಮರಣವು ಸಂಭವಿಸುವುದು ಸಿದ್ಧವೆಂಬುವುದು ತಮಗೆ ತಿಳಿದು ಇರುವುದಷ್ಟೆ. ಹೀಗಿರಲು ದೇವರು ಏತಕ್ಕೆ ನಮ್ಮನ್ನು ಈ ಪ್ರಪಂಚದಲ್ಲಿ ಸೃಜಿಸಿರುವನೆಂದು ತಿಳಿದರೆ ಅದು ಸಾಕಾಗಿರುವುದಲ್ಲವೆ ?

ಮಾಂಡವ. ಕ್ಷಣಿಕವಾಗಿರುವ ಈ ಪ್ರಪಂಚವು ಮಾಯಾವೃತವಾಗಿರುವುದೆಂದು ತಿಳಿದಿದ್ದಾಗ್ಯೂ, ದೇವರು ಯಾರನ್ನು ಯಾವ ವರ್ಣಾಶ್ರಮದಲ್ಲಿ ಸೃಜಿಸಿರುವನೊ, ಆಯಾ ವರ್ಣಾಶ್ರಮೋಚಿತವಾದ ಕಾರ್ಯಗಳನ್ನು ಮಾಡಲೇ ಬೇಕಲ್ಲವೇ? ಬ್ರಾಹ್ಮಣನು ವೇದಾಧಿಕಾರಿ. ಕ್ಷತ್ರಿಯನು ರಾಜ್ಯಾಧಿಕಾರಿ. ಹೀಗಿರಲು ಆಶ್ರಮೋಚಿತ ಧರ್ಮದಲ್ಲಿ ವಿಧಿಯಂತೆ ನಡೆದರೆ ಪರಮಾತ್ಮನನ್ನು ಸೇರುವುದರಲ್ಲಿ ಸಂದೇಹವಿಲ್ಲ.

ವಸಂತಮಿತ್ರ. ಸ್ವಾಮಿ, ಈ ದೇಹವು ಅನಿತ್ಯವಾದುದು. ಹೇಗೆಂದರೆ,

ಕಂದ ॥ ಮಲಿನಾಂಬರವಂ ಬಿಸುಡು
ತ್ತಲಸದೆ ನಿರ್ಮಲ ದುಕೂಲಮಂ ತಳೆಯುವವೋಲ್ ॥
ಬೆಳಗಳಿದಿರ್ಪೊಡಲುಳಿಯುತ
ನೆಲಸುತೆ ಪೊಸದೇಹದಲ್ಲಿ ಮೆರೆವಂ ಜೀವಂ ॥ ॥ ೨೬ ॥

ಹೀಗಿರಲು ಸರ್ವವೂ ನನ್ನದೆಂತಲೂ, ಸರ್ವದಾ ಸೌಖ್ಯದಲ್ಲಿರುವೆನೆಂತಲೂ ತಿಳಿದಿರುವ ಮೂಢಾಭಿಪ್ರಾಯವನ್ನು ನಾನು ನಿವರ್ತಿಸಿಕೊಂಡು, ದೇವರ ಧ್ಯಾನವನ್ನು ಮಾಡುತ್ತಾ ನಿಶ್ಚಂಚಲ ಮನಸ್ಸಿನಿಂದ ತಮ್ಮ ಸೇವೆಯಲ್ಲಿರುವೆನು. ಅಪ್ಪಣೆಯಾಗಬೇಕು.

ಮಾಂಡವ. ಒಂದೊಂದು ಹಂತವನ್ನು ಹತ್ತಿದಮೇಲಲ್ಲವೆ ಬೆಟ್ಟದಮೇಲಕ್ಕೆ ಹೋಗುವುದಕ್ಕಾದೀತು. ಹೀಗೆಯೇ ಆಶ್ರಮೋಚಿತ ಧರ್ಮವಾದಕರ್ಮವೂ, ಕರ್ಮದಿಂದ ಜ್ಞಾನವೂ, ಇದರಿಂದ ಮೋಕ್ಷವೂ ಹೊಂದಬಹುದಾಗಿದೆ. ಮೊದಲೇ ನಿನ್ನ ಸ್ಥಿತಿಯನ್ನು ತಿಳಿದುಕೊಳ್ಳದೆ ಸಂಸಾರ ನಿವರ್ತನಾಗಿ, ಪರ್ಣಾಶನ ಮಾಡಿಕೊಂಡು,

ಆಶಾನಿವರ್ತನಾಗಿ ನಮ್ಮಂತೆ ನೀನು ಅರಣ್ಯದಲ್ಲಿರುವುದೆಂದರೇನು. ಇದು ಅಸಾಧ್ಯವಾದ ಕಾರ್ಯವಲ್ಲವೆ?

ವಸಂತಮಿತ್ರ. ಹೂವಿನಿಂದ ನಾರು ಸುವಾಸನೆಯನ್ನು ಹೊಂದುವಂತೆ ತಮ್ಮನ್ನು ಸೇರಿದಮೇಲೆ ತಮ್ಮ ತಪಃಪ್ರಭಾವದಿಂದ ಅಂತಹ ಜ್ಞಾನವುಂಟಾಗದಿರುವುದೆಂದರೇನು! ಬಂಧಕ್ಕೂ, ಮೋಕ್ಷಕ್ಕೂ ಮನಸ್ಸೇ ಕಾರಣವು. ಇದನ್ನು ಜಯಿಸುವುದಕ್ಕೆ ಇಂದ್ರಿಯನಿಗ್ರಹವೇ ಮುಖ್ಯವು. ಅಲ್ಲದೆ,

ವೃತ್ತಂ॥ ವರಪಂಚೇಂದ್ರಿಯ ನೌಕವಿಂತು ಜವದಿಂದಾಶಾಬ್ಧಿಯೋಳ್
ತೇಲುತಂ। ತ್ವರೆಯಿಂದೈದುವ ಕಷ್ಟಮೆಂಬ ಮಡುವಿಂ ಪಾರಾ
ಗುತಂ ಮೋದದಿಂ॥ ಪರಮಾನಂದಮೆನಿಪ್ಪ ಮುಕ್ತಿ ತಟಮಂ
ಸಾರಲ್ಕೆ ನಾನಾವಗಂ। ಕರುಣಾಂಭೋನಿಧಿ ರಾಮಚಂ
ದ್ರನಡಿಯಂ ಸದ್ಭಕ್ತಿಯಿಂ ಧ್ಯಾನಿಪೆಂ॥ ೨೭॥

ಮಾಂಡವ. ಬಾಲಕನೆ, ನೀನು ಸಮಸ್ತ ವಿಷಯಗಳನ್ನೂ ತಿಳಿದಿರುವೆ. ಒಳ್ಳೇದು, ನಿನ್ನ ಸ್ನೇಹಿತನಲ್ಲಿ ನಿಜವಾದ ಪ್ರೀತಿಯು ಇರುವುದೊ?

ವಸಂತಮಿತ್ರ. ಆತನು ನನ್ನನ್ನು ರಾಜ್ಯಭ್ರಷ್ಟನನ್ನಾಗಿ ಮಾಡಿದಾಗ್ಗೂ, ಆತನಲ್ಲಿ ನನ್ನ ವಿಶ್ವಾಸವು ಒಂದೇರೀತಿಯಾಗಿರುವುದು. ಹಾಗೆ ನನ್ನ ಪ್ರೀತಿಯನ್ನು ಅವನಿಗೆ ತೋರಿಸದಿದ್ದರೆ ನನ್ನ ಸ್ನೇಹವು ಕಲ್ಮಷಯುಕ್ತವಾದುದೆಂದು ಹೇಳಬೇಕಲ್ಲವೆ?

ಮಾಂಡವ. ನಿಜವೇಸರಿ, ನಿನ್ನ ಸ್ನೇಹಿತನಿಗೆ ಪ್ರಾಪ್ತವಾಗುವ ವಿಪತ್ತುನಿನ್ನಿಂದಲೇ ಪರಿಹಾರವಾಗಬೇಕಾಗಿರುವುದು; ಏನುಮಾಡುವೆ?

ವಸಂತಮಿತ್ರ. ವಿಪತ್ತು! ಎಂತದು, ಬೇಗಹೇಳಿ?

ಮಾಂಡವ. ಮರಣ.

ವಸಂತಮಿತ್ರ. ಅಯ್ಯೋ, ಮಿತ್ರನೇ, ಅನ್ಯಾಯವಾಗಿ ಪ್ರಾಣವನ್ನು ಬಿಡುವೆಯಾ? ಸ್ವಾಮೀ, ಪ್ರಾಣವನ್ನು ಬಿಡುವುದಕ್ಕೆ ಕಾರಣವನ್ನು ಹೇಳುವುದಲ್ಲದೆ, ಆತನು ಈಗ ಹೇಗಿರುವನೊ ಅದನ್ನಾದರೂ ದಯವಿಟ್ಟು ಹೇಳಬೇಕು.

ಮಾಂಡವ. ಅಯ್ಯಾ, ನಿನ್ನ ಸ್ನೇಹಿತನನ್ನು ಕಾಪಾಡುವ ಮಾರ್ಗ ವನ್ನು ಅನುಸರಿಸುವೆಯೋ ಅಥವ ನನ್ನ ಸೇವಾವೃತ್ತಿಯಲ್ಲಿರು ವೆಯೋ ಹೇಳು?

ವಸಂತಮಿತ್ರ. (ಯೋಚಿಸಿ) ತಮ್ಮ ಅಪ್ಪಣೆಯಂತೆ ನಡೆದುಕೊ ಳ್ಳುವೆನು.

ಮಾಂಡವ. ನಿನ್ನ ಸ್ನೇಹಿತನು ನಿನ್ನನ್ನು ರಾಜ್ಯಭ್ರಷ್ಟನನ್ನಾಗಿ ಮಾಡಿದಮೇಲೆ ಆ ವೇಶ್ಯಾಂಗನೆಗೆ ಮರುಳಾಗದೆ, ನಿನ್ನನ್ನು ಅಗಲಿದ ದುಃಖದಿಂದಲೇ, ತನ್ನ ರಾಜ್ಯಕ್ಕೂ ಪ್ರವೇಶಿಸದೆ, ಅರಣ್ಯಮಾರ್ಗವಾಗಿ ಸಂಚರಿಸಿಕೊಂಡು ಹೋಗುತ್ತಿರುವಲ್ಲಿ, ಅಮೃತಶೇಖರೀ ಎಂಬ ಪಟ್ಟ ಣದ ಅರಸನಾದ ರಾಜಹಂಸನ ಮಗಳು ಆನಂದವತಿಯನ್ನು ಮದುವೆ ಯಾಗಬೇಕೆಂದು ನಿರ್ಬಂಧ ಪಡಿಸಲು ಕೊನೆಗೆ ಆತನು ಒಪ್ಪಿಕೊ ಳ್ಳಬೇಕಾಯಿತು. ಮದುವೆಯು ಇನ್ನು ಮೂರು ದಿವಸಗಳಿವೆ.

ವಸಂತಮಿತ್ರ. (ಹಸನ್ಮುಖದಿಂದ) ಮಹಾತ್ಮರೆ, ಆ ರಾಜ್ಯಕ್ಕೆ ಹೇಗೆ ಹೋಗಬೇಕು.

ಮಾಂಡವ. ನೀನು ಹೀಗೆಯೇ ದಕ್ಷಿಣಾಭಿಮುಖವಾಗಿ ಹೋದರೆ (ಕೈಯೆತ್ತಿ ತೋರಿಸಿ) ಪಟ್ಟಣವು ಸಿಕ್ಕುವುದು. ಆದರೆ ಮತ್ತೊಂದು ವಿಶೇಷವಿದೆ. ಮದುವೆಯಾದ ಐದನೆಯ ದಿವಸವೇ ನಿನ್ನ ಮಿತ್ರನಿಗೆ ಮರಣವು ಸಂಭವಿಸುವುದಲ್ಲದೆ, ನೀನು ಆತನ ವಿವಾಹಮಹೋ ತ್ಸವವನ್ನು ನೋಡಲು ಅಕಸ್ಮಾತ್ ಕೋಟೆಯೊಳಗೆ ಬಂದರೆ, ಖಂಡಿತವಾಗಿಯೂ ನಿನ್ನನ್ನು ಬಿಡಕೂಡದೆಂದು ಆಜ್ಞೆಮಾಡಿರುವ ನಲ್ಲ, ಇದಕ್ಕೆ ಏನುಮಾಡುವೆ?

ವಸಂತಮಿತ್ರ. ಆಹಾ! ಸಖನ ಮನಸ್ಸು ಇಷ್ಟರಮಟ್ಟಿಗೂ ಆಯಿತೆ? ಎಂತಹನೀಚಳು! ಎಂತಹಸ್ನೇಹಿತ!! ಎಂತಹಮರಣ!!! ಪೂಜ್ಯರೆ, ತಾವೇ ಇದಕ್ಕೆ ಉಪಾಯವನ್ನು ಹೇಳಬೇಕು. ಅಲ್ಲದೆ ನನ್ನ ಮಿತ್ರನನ್ನು ಈ ನನ್ನ ಪಾಪಿ ಕಣ್ಣುಗಳಿಂದ ನೋಡುವಹಾಗೆ ಅನು ಗ್ರಹ ಮಾಡಬೇಕು.

ಮಾಂಡವ. ಹಾಗಾದರೆ ನೀನು ಆ ಪಟ್ಟಣದ ಕೋಟೆಯ ದಕ್ಷಿಣಭಾಗಕ್ಕೆ ಹೋದರೆ ಅಲ್ಲಿ ಒಂದು ಕುಟೀರವಿರುವುದು. ಅಲ್ಲಿ ನಿನ್ನ ಬುದ್ಧಿಯನ್ನುಪಯೋಗಿಸಿದರೆ ಎಲ್ಲಾ ಕೈಗೂಡುವುದು.

ವೃ ॥ ವರರತ್ನಾಕರದಂತೆ ಭೂನುತಲಸಚ್ಛ್ರೀಮುಖ್ಯರಾರಾಜಿತಂ ।
ಗಿರಿಜಾವಲ್ಲಭನಂತೆ ಸದ್ವಿಜಯುತಂ ಶ್ರೀರಮ್ಯ ರಾಜಾನ್ವಿತಂ ॥
ಸಿರಿಯಂತೈದೆಸದಾನಭೋಗನುತ ಭೃತ್ಯಾನಂದದಂ ಸಂತತಂ ।
ಪೊರೆಗೆಮ್ಮಂ ನತದೇವತೋಜ್ವಲ ಕುಜಂ ಶ್ರೀಕೃಷ್ಣ ಭೂಪಾಲಕಂ ॥ ॥ ೨೮ ॥

ವಸಂತಮಿತ್ರ. ಪೂಜ್ಯರೆ ಅಪ್ಪಣೆಯಾದರೆ ಹೋಗುವೆನು.

(ಎಂದು ಹೊರಡುವನು)

---

ರಾಗ—ಜುಂಜೋಟಿ　　　ಛಾಪು.

ಮುನಿವರೇಣ್ಯಾ ನಾನುಧನ್ಯ ನಾದೆಧರೆಯೊಳು ॥ ವಿನಯದಿಂದ ಲೆರಗುವೆತವ ಪಾದಪದ್ಮಕೆ ॥ ಪ ॥ ಮುದದಿಸಬನ ನುಳಿಪಮಾರ್ಗ ನಿಜದಿತೋರಿದೆ ॥ ಸದಯಹೃದಯ ಪೋಗಿಬರ್ಪೆನು ಹರಸಿಕಳುಹಿಸು ॥ ೧ ॥

ಪ್ರ ಥ ಮಾ ಂ ಕ ಂ ಸ ಂ ಪೂ ರ್ಣ ಂ.

## ದ್ವಿತೀಯಾಂಕಂ.

---o---

ಸ್ಥಾನ ೧.—ಅಮೃತಶೇಖರಿ ಪಟ್ಟಣದ ಕೋಟೆಯ ಬಾಗಿಲು. ಒಂದು ಚಿತ್ರಪಠವು ನೇತುಹಾಕಿರುವುದು.

(ಒಬ್ಬ ಸೇವಕನು ನಿಂತಿರುವನು.)

ವೃ ॥ ಭೂಮಿಪಾಲನ ಸೇವೆಗೆಯ್ವುತೆ ಸತ್ವವೆಲ್ಲಿವು ಪಿಂಗಿತ್ತೈ ।
ಕಾಮಿತಾರ್ಥಗಳೆಲ್ಲ ಪೋದುವು ಹೀನವೃತ್ತಿಯುಗೈಯುತಾಂ ॥
ಪ್ರೇಮದಿಂದುರೆನೋಡುತೆಂಮನದಾರುಪಾಲಿಪರಕ್ಕಟಾ ।
ಸೋಮಶೇಖರ ನಿಂತುನಿರ್ದಯನಾದನೆಮ್ಮೊಳದೇತಕೋ ॥ ॥೨೯॥

ಸೇವಕ. ಇದು ಹಾಗಿರಲಿ. ಈ ಅಮೃತಶೇಖರಿ ಪಟ್ಟಣದ ಮಹಾರಾಜನ ಮಗಳಾದ ಆನಂದವತಿಯನ್ನು ಸೌಗಂಧಿಕನೆಂಬ ರಾಜಪುತ್ರನಿಗೆ ಕೊಟ್ಟು ವಿವಾಹವು ಬಹು ವಿಜೃಂಭಣೆಯಿಂದ ನೆರವೇರುತ್ತಿರುವುದು. ಆದರೆ ಸೌಗಂಧಿಕನು ತನ್ನ ಮಿತ್ರನಾದ ವಸಂತಮಿತ್ರನುಇಲ್ಲಿಗೆ ಬಂದರೆ ಕೋಟೆಯೊಳಗೆ ಖಂಡಿತವಾಗಿಯೂ ಬಿಡಕೂಡದೆಂದು ಆಜ್ಞೆಮಾಡಿರುವನು. ಇದಕ್ಕೆ ಕಾರಣವೇನಿರಬಹುದು. (ಯೋಚಿಸಿ) ಮಿತ್ರನನ್ನು ಇಂತಹ ಸಂತೋಷ ಕಾಲದಲ್ಲಿಯೂ ಒಳಕ್ಕೆ ಬಿಡಕೂಡದೆಂದು ಆಜ್ಞೆಮಾಡಿರುವುದಕ್ಕೆ ಆತನು ಎಂತಹ ಮಿತ್ರದ್ರೋಹಿಯಾಗಿರಬಹುದು. ಆಹಾ! ಪ್ರಪಂಚದಲ್ಲಿ ಸ್ನೇಹ ಮಾಡುವುದೇ ಕಷ್ಟಕ್ಕೆ ಬಂತಲ್ಲ!! ನಾವು ಒಬ್ಬನನ್ನು ಸ್ನೇಹ ಮಾಡಬೇಕಾಗಿದ್ದರೆ ಮೊದಲು ಅವನ ಗುಣಾವಗುಣಗಳನ್ನು ಪರಿಶೀಲನೆ ಮಾಡಬೇಕು. ಕೆಲವರು ಸ್ನೇಹಿತರಂತೆ ಮೊದಲು ನಟಿಸಿ, ಆಂತರ್ಯಕ್ಕೆ ಪಾತ್ರರಾಗಿ, ಕಷ್ಟಕಾಲ ಬಂದಾಗ್ಗೆ ಹೊರಟು ಹೋಗುವರು. ಮತ್ತೆ ಕೆಲವರು ತಮ್ಮ ಮನಸ್ಸಿಗೂ ಕಾರ್ಯಗಳಿಗೂ ಭೇದವಿಲ್ಲದಂತೆ ತೋರ್ಪ

ಡಿಸಿಕೊಳ್ಳುತ್ತಾ, ಸ್ವಕಾರ್ಯದಲ್ಲಾಸಕ್ತರಾಗಿ, ತಮ್ಮ ಮನೋಗತವನ್ನು ನೆರವೇರಿಸಿಕೊಂಡನಂತರ ಬಿಟ್ಟು ಹೋಗುವರು. ಆದರೆ ನಿಜವಾದ ಸ್ನೇಹಿತನಾದರೋ,

ಕಂದ ॥ ತನ್ನಯಬಾಳ್ಕೆಯನುಳಿಯು
ತ್ತನ್ಯರಸೌಖ್ಯಕ್ಕಸುವನೆನೀಡುತ್ತಮುನಿಶ ॥
ಬನ್ನದೊಳೆದೆಗೆಡದೆಡೆಜಿಡ
ದುನ್ನತಪ ನವನೆತೋರ್ದನಿ ಸೇಮಿತ್ರಂ ॥ ॥ ೩೦ ॥

ಇದು ಹಾಗಿರಲಿ. ಮಿತ್ರರಲ್ಲಿ ವೈಷಮ್ಯವು ಹುಟ್ಟಬೇಕಾಗಿದ್ದರೆ, ಅಕಸ್ಮಾತ್ತಾಗಿ ಪ್ರಾಪ್ತವಾಗುವ ವಿಷಯದ ನಿಜಾಂಶವನ್ನು ತಿಳಿಯದೆ ಭ್ರಾಂತಚಿತ್ತರಾಗುವುದೇ ಕಾರಣವೆಂದು ತೋರಿ ಬರುವುದು. ಇದು ಹೀಗೆಯೇ ಇರಬಹುದು. ಒಳ್ಳೇದು ನನ್ನ ಕಾರ್ಯದಲ್ಲಿ ನಾನು ಎಚ್ಚರಿಕೆಯಾಗಿರುವೆನು.

## ವಸಂತಮಿತ್ರನ ಪ್ರವೇಶ.

ವಸಂತಮಿತ್ರ. ಈ ಅಮೃತಶೇಖರಿ ಪಟ್ಟಣದೊಳಗೆ ಪ್ರವೇಶಿಸಬೇಕೆಂದು ಎಲ್ಲಾ ಕಡೆಯಲ್ಲಿಯೂ ಪ್ರಯತ್ನಪಟಾಗ್ಯೂ ಸೇವಕರು ನನ್ನನ್ನು ಯಾವ ಬಾಗಿಲಿಂದಲೂ ಒಳಕ್ಕೆ ಬಿಡಲಿಲ್ಲ. ಕಾಲವಾನರೊ ಗತಿಸಿಹೋಗುತ್ತಾ ಬಂತು. ಏನುಮಾಡಲಿ. ಒಳ್ಳೇದು ಈ ಬಾಗಿಲಿಂದಾದರೂ ಒಳಕ್ಕೆ ಪ್ರವೇಶಿಸುವೆನು.

(ಎಂದು ೨-೩ ಹೆಜ್ಜೆಗಳನ್ನಿಡುವನು.)

ಸೇವಕ. * ಯಾರಲ್ಲಿ, ಅಪ್ಪಣೆಯಿಲ್ಲದೆ ಒಳಕ್ಕೆ ಹೋಗುವುದೆಂದರೇನು? ರಾಜಾಜ್ಞೆಯು ಬಲವತ್ತರವಾಗಿರುವುದಲ್ಲವೆ?

---

* ರಾಗ—                                    ತಾಳ.

ನೀನಾವನೊ ಅರುಹದೆತೆರಳುವ ॥ ಪ ॥ ಜನಪನನಿಮುಮುವ ಕೆಡೆಗಣಿಪ। ವಿನಯುವನುಳಿಯುವ ತೆರಂತೋರುವ ॥ ೧ ॥ ಧರಣಿಪನು ನಿಯಮಿಸಿರೆ ನನ್ನ। ತೆರಳ್ವರನೋಡಿ ಬಿಡುತಿಹೆನು ॥ ೨ ॥ ಪೆಸರೆನಗರುಹು ತ ಲಡಿಯಿಡುಮುಂದೆ। ವುಸಿಮುನಗುಸಿರದು ಬಿಸಜನಯನಕೇಳ್ ॥ ೩ ॥

* ಅಯ್ಯೋ ! ದೇವರೆ, ಇಲ್ಲಿಯೂ ಮತ್ತೊಂದು ತೊಂದರೆಯನ್ನು ಉಂಟುಮಾಡಿರುವೆಯಾ. ಅಯ್ಯಾ ನಾನು ಯಾರಾದರೆ ನಿನಗೇನು. ನಾನು ಕೋಟೆಯೊಳಗೆ ಹೋಗಬೇಕೆಂದಿರುವೆನು. ನನ್ನನ್ನು ತಡೆವು ದೇಕೆ? ಇದಕ್ಕೂ ನಿನ್ನನ್ನು ಆಶ್ರಯಿಸಬೇಕೊ?

ಸೇವಕ ತಮ್ಮ ತಮ್ಮ ಕೆಲಸಗಳನ್ನು ನೆರವೇರಿಸಿಕೊಳ್ಳಬೇಕಾಗಿದ್ದರೆ ಎಂತಹವನನ್ನಾದರೂ ಅನುಸರಿಸಲೇಬೇಕು. ವಸುದೇವನು ತನ್ನ ಮಗನನ್ನು ಕೊಲ್ಲುವುದಕ್ಕೆ ಕಂಸನು ಬರುವನೆಂದು ತಿಳಿದು ಕತ್ತೆಯ ಕಾಲನ್ನು ಕಟ್ಟಲಿಲ್ಲವೆ?

ವಸಂತಮಿತ್ರ. ಇಂತಹ ಸಾಮ್ಯವನ್ನೇ ಜ್ಞಾಪಕದಲ್ಲಿಟ್ಟುಕೊಂಡು, ಈಗಿನ ದೊಡ್ಡಮನುಷ್ಯರಲ್ಲಿ ಸೇವಾವೃತ್ತಿಯಲ್ಲಿರುವಿರಲ್ಲವೆ! ಯಾರಾದರೂ ದೊಡ್ಡಮನುಷ್ಯರನ್ನು ನೋಡಲು ಬಂದರೆ, ನೀವು ಅವರಿಂದ ಲಂಚವನ್ನು ತೆಗೆದುಕೊಂಡು ಸಮಯೋಚಿತವಾಗಿ ಯಜಮಾನನ ಕರ್ತವ್ಯವನ್ನು ನಡೆಸುವುದರಲ್ಲಿ ಸಂದೇಹವಿಲ್ಲ. ಇದು ನಾನು ಅನುಭವಿಸಿದುದಲ್ಲವೆ?

ಸೇವಕ. ಇಂತಹ ಮಾತುಗಳು ನನಗೆ ಯೋಗ್ಯವಾದುದಲ್ಲ. ಕೋಪೋದ್ರೇಕಕರವಾದ ಮಾತುಗಳನ್ನಾಡಿದರೂ ಕೇಳಿ ಸುಮ್ಮನಿರುವೆನು. ತಾಳ್ಮೆ ಗುಣವನ್ನು ಶ್ರೇಷ್ಠವೆಂದು ಭಾವಿಸಿರುವೆನು. ಆದರೆ ಖಂಡಿತವಾಗಿಯೂ ಒಳಕ್ಕೆ ಬಿಡಕೂಡದೆಂಬ ರಾಜಾಜ್ಞೆಯನ್ನು ಮೀರಲು ನನ್ನ ಯೋಗ್ಯತೆಗೆ ಕುಂದುಕವು. ಕ್ಷಮಿಸಿ.

(ಬ್ರಾಹ್ಮಣರು ಪುಷ್ಪಹಾರಗಳಿಂದ ಶೋಭಿಸುತ್ತಾ, ಪಟ್ಟಣದೊಳಗಿನಿಂದ ಹೊರಕ್ಕೆ ಬರುವರು )

---

* ರಾಗ.

ಬೆಡಗಿನ । ನುಡಿಗಳು । ನುಡಿಯುವ । ನಡವಳಿ । ನಡೆಯದು । ನಡೆ ನಡೆನೀಂ ॥ ಪ ॥ ತಡೆವುದೇತಕೆ । ನಡೆಯೊಮುಂದಕೆ । ದುಡುಕಿಯುನ್ನೊಳಾಡುವರೆ ॥ ತಡೆವುದು । ನಡತೆಯೆ । ಬಿಡುಬಿಡು । ಫಡನಡೆ ॥ ೧ ॥

ವಸಂತಮಿತ್ರ. ಈ ಬ್ರಾಹ್ಮಣರು ನನ್ನ ಮಿತ್ರನ ವಿವಾಹ ಮಹೋತ್ಸವವನ್ನು ನೋಡಿಕೊಂಡು ಬಂದಂತೆ ತೋರುವುದು. ಒಳ್ಳೇದು, ನನ್ನ ಮಿತ್ರನ ವಿವಾಹದ ವೈಭವಾತಿಶಯವನ್ನು ಇವರಿಂದಲಾದರೂ ಕೇಳಿ ಸಂತೋಷಪಡುವೆನು. (ಹತ್ತಿರಕ್ಕೆ ಹೋಗಿ) ಸ್ವಾಮಿ, ನಮಸ್ಕರಿಸುವೆನು.

೧ನೇ ಬ್ರಾಹ್ಮಣ ಅಯ್ಯಾ, ನಿನಗೆ ಮಂಗಳವಾಗಲಿ.

ವಸಂತಮಿತ್ರ. ಪೂಜ್ಯರೆ, ತಾವು ಎಲ್ಲಿಗೆ ದಯಮಾಡಿಸಿದ್ದಿರಿ?

೨ನೇ ಬ್ರಾಹ್ಮಣ. ಈ ಪಟ್ಟಣದ ಮಹಾರಾಜನ ಮಗಳಾದ ಆನಂದವತಿಯನ್ನು ಒಬ್ಬ ರಾಜಕುಮಾರನಿಗೆ ಕೊಟ್ಟು ವಿವಾಹವು ಬಹು ವಿಜೃಂಭಣೆಯಿಂದ ನೆರವೇರಿತು. ರಾಜನು ತನ್ನ ಸಂತೋಷಾರ್ಥವಾಗಿ ಜನಗಳ ಯೋಗ್ಯತಾನುಸಾರ ಮಾನ ಮರ್ಯಾದೆಗಳನ್ನುಮಾಡಿ ಕಳುಹಿಸಿರುವನು. ನಾವು ಹೋಗಿದ್ದೆವು. ಈಗ ನಮ್ಮ ನಮ್ಮ ಮನೆಗಳಿಗೆ ಹೋಗುವೆವು.

ವಸಂತಮಿತ್ರ. ಈ ಶುಭ ಸಮಾಚಾರವನ್ನು ಕೇಳಿ, ನನಗೆ ಬಹಳ ಸಂತೋಷವಾಯಿತು. ಇದಕ್ಕಾಗಿ ಕೊಡುವ ಈ ಅಲ್ಪ ದ್ರವ್ಯವನ್ನು ಸ್ವೀಕರಿಸಬೇಕು. (ತನ್ನ ಕೊರಳಿನಲ್ಲಿದ್ದ ಮುತ್ತಿನ ಹಾರವನ್ನು ಒಬ್ಬರಿಗೆ ಹಾಕಿ ಮಿಕ್ಕವರಿಗೆ ದಕ್ಷಿಣೆಯನ್ನೂ ಕೊಡುವನು ) ಪೂಜ್ಯರೆ! ವರಸಾಮ್ಯವು ಚೆನ್ನಾಗಿರುವುದೆ?

೩ನೇ ಬ್ರಾಹ್ಮಣ. ವಿಧಿಗೆ ಅನುಸಾರವಾಗಿಯೇ ಇದೆ. ಕೇಳಿ ಪ್ರಯೋಜನವಿಲ್ಲ.

ವಸಂತಮಿತ್ರ. ಸ್ವಾಮಿ ತಾವು ಹೀಗೆ ಹೇಳಿದರೆ ನನಗೆ ಬಹಳ ವ್ಯಸನವಾಗುತ್ತೆ. ನಿಜಾಂಶವನ್ನು ಹೇಳಬೇಕು.

---

ರಾಗ—ಶಂಕರಾಭರಣದನೋಟ್. ಏಕ.

ಅಹಹಭೂಪ ನಿಂತುಪ್ಪಸ್ತ್ರ ವಿಂತುರಚಿಸಿದ । ವಿಹಿತಪಾತ್ರ ವರಿತುಮಾನ ವಿತ್ತ್ರ ಕಳುಹಿದ ॥ ೧ ॥ ಭೋಜ್ಯವಸ್ತು ಗಳಿನೆಸತತ ತೃಪ್ತಿಯೊಂದಿಸಿ ॥ ರಾಜ್ಯಕೆಲ್ಲ ದಾನಧರ್ಮ ಗಳನುಮಾಡಿಸಿ ॥ ೨ ॥ ಇತ್ತನೋಡು ಊಟಮಾಡಿ ತೃಪ್ತರಾದೆವೀಗಲೆ ॥ ನಿತ್ಯತೃಪ್ತಿ ಯೊಂದೆನುನವು ಸೆಳೆವುದೀಗಲೆ ॥ ೩ ॥

೨ನೇ ಬ್ರಾಹ್ಮಣ. ಅಯ್ಯ, ಈ ವಿಷಯವನ್ನು ಹೇಳಲು ಇವರು ಹೆದರಿಕೊಳ್ಳುವರು. ಕೇಳು, ದಂಪತಿಗಳ ಜಾತಕಗಳನ್ನು ನಾವು ನೋಡಿದ್ದರಲ್ಲಿ ವರನಿಗೆ ೨೫ನೇ ವರುಷಕ್ಕೆ ಮರಣವು ಪ್ರಾಪ್ತವಾಗುವುದು. ಇದು ತಪ್ಪತಕ್ಕುದಲ್ಲ. ಯೋಚಿಸಿ ಫಲವಿಲ್ಲ. ವಿಧಿಯನ್ನು ಮೀರಿ ನಡೆಯತಕ್ಕವನಾವನೂ ಇಲ್ಲ. ಪ್ರಪಂಚದಲ್ಲಿ ಸಕಲ ಕಾರ್ಯಗಳೂ ದೈವಾಯತ್ತವೆಂದು ಭಾವಿಸಿ ನಡೆದುಕೊಳ್ಳುವವನೇ ಬುದ್ಧಿವಂತನು. ಹಠದಿಂದಲೂ, ಸ್ಥಾನ ಬಲದಿಂದಲೂ ಮೌಢ್ಯದಿಂದಲೂ ನೆರವೇರಿಸುವ ಕಾರ್ಯಗಳು ಪ್ರಯೋಜನಕರವಲ್ಲ. ವಿಧಿಯಂತೆ ನಡೆಯದೆ, ಜಾತಿ, ಕುಲಧರ್ಮಗಳೊಂದನ್ನೂ ಲಕ್ಷ್ಯಕ್ಕೆ ತಾರದೆ ನಡೆಯುವ ಈಗಿನ ದೊಡ್ಡ ಮನುಷ್ಯರಿಗೆ ಪ್ರಾಪ್ತವಾಗಿರುವ ಅನಾಚರಣೆ ಮತ್ತು ದುರಾಚಾರಗಳಿಂದುಂಟಾದ ಅನಾಹುತಗಳಿಂದ ಇವರ ಅಹಂಕಾರವು ಇನ್ನೂ ಅಡಗುತ್ತಾ ಇಲ್ಲ. ಮಾದತಕ್ಕುದೇನು ' ಪೂರ್ವಾಚಾರವನ್ನು ಬಿಡದೆ, ಅವಿವೇಕವಾಗಿರದೆ, ಜನಗಳ ಪರಿಹಾಸೆಗೆ ಗುರಿಯಾಗದೆ, ಕಷ್ಟಕ್ಕೊಳಗಾಗದೆ, ಅಸಾಧ್ಯವಾದ ಕಾರ್ಯಕ್ಕೆ ಪ್ರವರ್ತಿಸದೆ, ಸಾಧ್ಯವಾದುದನ್ನು ಪರ್ವತದಂತೆ ಮಾಡಿಕೊಳ್ಳದೆ, ಅಮಲೇರುವ ದ್ರಾವಕವನ್ನು ಸೇವಿಸದೆ, ಇರುವವನಾವನೋ ಆತನೇ ದೊಡ್ಡ ಮನುಷ್ಯನು. ಇಂತಹ ಸದ್ಗುಣಗಳು ಸದ್ವಂಶದಲ್ಲಿ ಜನಿಸಿದುದರಿಂದಾಗಲಿ, ಬಹಿರಾಡಂಬರದುಕೂಲಾಚ್ಛಾದನದಿಂದಾಗಲಿ, ವಿಚಿತ್ರವಾಹನಾರೂಢನಾಗುವುದರಿಂದಾಗಲಿ, ಅಮಿತದ್ರವ್ಯಶೇಖರದಿಂದಾಗಲಿ, ಇಂತವನು ದೊಡ್ಡ ಮನುಷ್ಯನೆಂದು ಹೇಳಿಸಿಕೊಳ್ಳಲಾರನು. ಅಯ್ಯ, ಇನ್ನು ನಾವು ಹೋಗುವೆವು.

(ಹೋಗುವರು.)

ವಸಂತಮಿತ್ರ. ಅಯ್ಯೋ, ಮಿತ್ರನೆ; ನಿನಗೆ ವಿಪತ್ತು ತಪ್ಪತಕ್ಕುದಲ್ಲವೆಂದು ವಿಪ್ರೋತ್ತಮರೂ ಹೇಳಿದರಲ್ಲ. ಏನುಮಾಡಲಿ, ಎಲ್ಲಿಗೆ ಹೋಗಲಿ.

ಕಂದ ॥ ತೊದಳಾಗದು ವಿಪ್ರರನುಡಿ
ಯದೆಂತುಟೋ ವಿಧಿಯುಬರಪ ಮಳಿಸಲಸಾಧ್ಯಂ ॥
ಒದಗಿದ ಸಖನವಿಯೋಗಾಂ
ಬುಧಿಯುಂದಾಂಟುವ ಸುಪುಣ್ಯವೆಂದಿಗೆಲಭಿಕುಂ ॥ ॥ ೩೧ ॥

(ಸೇವಕನನ್ನು ನೋಡಿ) ಅಯ್ಯ, ಆಶೆಯೆಂಬುದು ಬಹಳ ಕೆಟ್ಟದ್ದು. ಇದರಿಂದ ಅಮೋಘವಾದ ನನ್ನ ಪದವಿಯನ್ನು ಲಕ್ಷಿಸದೆ, ಭೃತ್ಯನಾಗಿರುವ ನಿನ್ನನ್ನು ಇಷ್ಟು ವಿನಯದಿಂದ ಕೇಳಿಕೊಳ್ಳಬೇಕಾಗಿದೆ. ನೀನು ಸುಖದುಃಖಗಳನ್ನು ಚೆನ್ನಾಗಿ ಅನುಭವಿಸಿದವನೆಂದು ಮನಸ್ಸಿಗೆ ಹೊಳೆಯುವದು. ಇತರರ ಕಷ್ಟವೇ ತಮ್ಮ ಕಷ್ಟವೆಂದುಭಾವಿಸಿರುವ ಮಹನೀಯರಲ್ಲಿ ನೀನು ಗುರು ಶುಶ್ರೂಷೆಮಾಡಿದ್ದು, ನನ್ನ ಮೃದುವಾದ ಮಾತುಗಳು ನಿನ್ನ ಮನಸ್ಸನ್ನು ಕರಿಗಿಸುವುದಾಗಿದ್ದರೆ, ನನ್ನ ವಿಜ್ಞಾಪನೆಯು ನಿರರ್ಥಕವಾಗಲಾರದೆಂದು ಭಾವಿಸುವೆನು.

ಸೇವಕ ಈತನ ಮಾತುಗಳು ಎಷ್ಟು ವಿನಯವಾಗಿರುವುವು! ರಾಜಾಜ್ಞೆಯಾದರೊ ಬಹು ಕಠಿಣವಾಗಿರುವುದು. ಏನು ಹೇಳುವುದಕ್ಕೂ ಬುದ್ಧಿ ತೋರುವುದಿಲ್ಲವಲ್ಲ. ಒಳ್ಳೇದು. ಅಯ್ಯ, ನಿನ್ನ ಹೆಸರೇನು?

ವಸಂತಮಿತ್ರ. ಪರಮಪಾತಕಿಯಾದ ವಸಂತಮಿತ್ರನೆಂದು ಕರೆಯುವರು.

ಸೇವಕ ಆಶ್ಚರ್ಯ! ಆಶ್ಚರ್ಯ, ಇದು ಹಾಗಿರಲಿ, ಇಲ್ಲಿಗೆ ಬಾ!! (ಸ್ವಲ್ಪದೂರ ಕರೆದುಕೊಂಡು ಹೋಗಿ) ಇದೋ ನೋಡು. ಈ ಚಿತ್ರಪಠಕ್ಕೂ ನಿನ್ನ ಮುಖಭಾವಕ್ಕೂ ಹೋಲಿಸಿದುದಾದರೆ ಒಂದೇಯಾಗಿರುವುದು. ಸೌಗಂಧಿಕನು ನಿನ್ನನ್ನೇ ಕುರಿತು ಹೇಳಿದಂತೆ ತೋರುವುದು. ಒಳ್ಳೇದು, ಈ ಕಾಗದವನ್ನು ಓದಿ ನೋಡಿಕೊ; (ಮಿತ್ರನ ಭಾವಚಿತ್ರವೆಂದು ಭ್ರಾಂತಿಪಟ್ಟು, ಚಿತ್ರಪಠವನ್ನು ನೋಡಿ) ಅಯ್ಯಾ,

ಕಂದ ॥ ಸದಯಾತ್ಮನೆನ್ನೊಳುದ್ಯ
ನ್ಮೃದುಮಧುರೋಕ್ತಿಯ ವಿನೋದದಿಂದಾಡುವವೊಲ್
ಸದಯಾಪಾಂಗದೊಳೀಕ್ಷಿಸಿ
ಮುದವಾಂತುವಿರಾಜಿಸುತ್ತಲಿರ್ಪಂನೋಡೈ ॥ ೩೨ ॥

ವಸಂತಮಿತ್ರ. ಬರೆದ ಅಂಶವನ್ನು ನೀನೇ ಓದಿಹೇಳು.

ಸೇವಕ. ವಸಂತಮಿತ್ರನೆಂಬ ಮಿತ್ರದ್ರೋಹಿಯು ಕೋಟೆಯೊಳಗೆ ಪ್ರವೇಶಿಸುವುದಾದರೆ ಖಂಡಿತವಾಗಿಯೂ ಒಳಗೆ ಬಿಡಕೂಡದೆಂಬ ಅಂಶವನ್ನು ಇದರಲ್ಲಿ ಬರೆದಿರುವುದು.

ವಸಂತಮಿತ್ರ. ನನ್ನ ಪರಮಮಿತ್ರನು ಇಷ್ಟು ಖಂಡಿತವಾಗಿಯೂ ನನಗೆ ಆಜ್ಞೆಮಾಡಿರುವನೆ! (ಸ್ವಗತ) ಮಿತ್ರನ ವಿವಾಹವನ್ನು ನೋಡಲು ಅಸಾಧ್ಯವಾದ ಹೇಡಿಯೇ ಸಾಯಬಾರದೆ. (ಬೀಳುವನು.)

ಸೇವಕ. ಅಯ್ಯ, ಏಳು ಏಳು. "ಅತ್ಯನ್ನತಃ ಪತನಹೇತುಃ" ಎಂಬಂತೆ ನೀನು ಮಿತಿಮೀರಿ ಮಾಡಿದ ಸ್ನೇಹವೇ ನಿನ್ನನ್ನು ಇಂತಹ ದುರ್ದೆಶೆಗೆ ತಂದಿತು. ಈಗಲಾದರೂ ಯಾವ ಕೆಲಸವನ್ನಾಗಲಿ ಮಿತಿ ಮೀರಿ ಮಾಡಬಾರದೆಂದು ತಿಳಿದುಕೊ.

ವಸಂತಮಿತ್ರ. (ಮೇಲಕ್ಕೆ ಎದ್ದು) ಅಯ್ಯ, ನನ್ನಮಿತ್ರನು ಪ್ರಾಣ ಬಿಡುವನೆಂದು ವಿಪ್ರೋತ್ತಮರು ಹೇಳಿರುವರು. ಒಂದುಸಾರಿ ಆತನ ಮುಖಾರವಿಂದವನ್ನು ನೋಡಿ ಪ್ರಾಣಬಿಡಬೇಕೆಂದೇ ನನ್ನ ಮನೋ ನಿಶ್ಚಯವು. ತೆಗೆದುಕೊ ಬಹುಮಾನವಾಗಿ ಕೊಡುವ ಹಣವನ್ನು

(ಕೊಡುವುದಕ್ಕೆ ಕೈ ನೀಡುವನು)

ಸೇವಕ. ನಿಮ್ಮ ಶ್ಲಾಘ್ಯವಾದ ಸ್ನೇಹಭಾವಕ್ಕೆ ನಾನು ಮೆಚ್ಚಿ ದಾಗ್ಯೂ ನಿಮ್ಮನ್ನು ಕೋಟೆಯೊಳಗೆ ಬಿಡೋಣವೆಂದರೆ ಸ್ವಾಮಿಭೃತ್ಯ ನ್ಯಾಯವೆಂಬ ದಂಡವು ನನ್ನನ್ನು ಭೀತಿಪಡಿಸುತ್ತಿರುವುದು. ಆದರೆ ಲಾಲಿಸಬೇಕು. ಸೇವಾವೃತ್ತಿಯು ಅತಿ ಹೇಯವಾದುದು.

ಯಜಮಾನನ ಮನೋವೃತ್ತಿಯಂತೆ ನಡೆದು, ತನ್ನ ಕರ್ತವ್ಯ ವನ್ನು ನಡೆಸಿ, ತ್ರಿಕರಣಗಳಲ್ಲಿಯೂ ಒಂದೇರೀತಿಯಾಗಿ ಆಚರಿಸಿ, ಆತನ ಅಭಿವೃದ್ಧಿಯನ್ನೇ ಬಯಸತಕ್ಕವರಲ್ಲಿ ಸೇವಕನಾದ ನನ್ನ ವಂಚನೆಯು ಒಂದುವೇಳೆ ರಾಜನಿಗೆ ಅಗೋಚರವಾಗಿದ್ದರೂ ಸರ್ವಜ್ಞನಾದ ಪರಮಾತ್ಮನಿಗೆ ಗೋಚರವಿಲ್ಲವೆ? ಅಪನಂಬಿಕೆ ಯಿಂದ ಅಪ್ರತಿಹತವಾದ ಅನರ್ಥಗಳು ಅಡಿಗಡಿಗೂ ಅನುವರ್ತಿಸು ವುದರಲ್ಲಿ ಅನುಮಾನವೇನಿದೆ. ಆರ್ಯರೆ, ಅರುಹಿದುದನ್ನು ಅಕ್ಕರೆ ಯಿಂದ ಆಲಿಸಿ ಅಜ್ಞನಾದವನಿಗೆ ಆಜ್ಞೆಯಾಗಬೇಕೆಂದು ಆಜ್ಞಾಧಾರ ಕನು ಆನಮಿಸುವನು. (ನಮುಸ್ಕರಿಸುವನು.)

ಕಂದ ॥ ಪರಸೇವಾವೃತ್ತಿಯೆತಾಂ
ನೆರೆನಿಂದಿತ ಮೆನಿಪುದವನಿಯೊಳ್ನಿಜಧರ್ಮಾ ॥
ಚರಣೆಯಬಿಡದಾವಂತ
ಸ್ನೆರೆಯನ ವಿಧಿಮೀರ ದಿರ್ಪನವನೇ ಭೃತ್ಯಂ ॥ ॥ ೩೩ ॥

* ವಸಂತಮಿತ್ರ. ಇಂತಹ ಭೃತ್ಯನನ್ನು ನಾನು ಇದುವರೆಗೂ ಎಲ್ಲಿಯೂ ನೋಡಲಿಲ್ಲ. ಮನುಷ್ಯನು ಎಂತಹ ಸ್ಥಿತಿಯಲ್ಲಿದ್ದಾಗ್ಯೂ ತನ್ನ ಕರ್ತವ್ಯವನ್ನು ಬಿಡದೆ ನ್ಯಾಯವರಿತು ಮಾಡುವ ಕೆಲಸವೇ ಶ್ಲಾಘನೀಯವಾದುದು. ಬಳಿಗೆ ಬಿಡೆಂದು ಕೇಳುವುದಕ್ಕೆ ನನಗೆ ನಾಲಗೆಯೇ ಬರುವವಿಲ್ಲ. ಈಗ ಏನುಮಾಡಲಿ, (ಯೋಚಿಸಿ) ಮಹಾತ್ಮರಾದ ಆ ಮಾಂಡವ ಋಷಿಗಳು ಹೇಳಿದಂತೆ ಈ ಊರು ಹೊರಗಿನ ಕುಟೀರಕ್ಕೆ ಹೋಗುವೆನು. ದೇವರ ಚಿತ್ತವಿದ್ದಂತಾಗಲಿ.

(ಹೋಗುವನು.)

---

ಸ್ಥಾನ೨.—ಕುಟೀರ, ಸುರಂಗದಮಾರ್ಗ.

(ಒಬ್ಬ ಕುಂಟನು ಕೂತಿರುವನು.)

ಕುಂಟ. ದೇವರು ಮನುಷ್ಯನನ್ನು ನೀಚಸ್ಥಿತಿಯಲ್ಲಿಟ್ಟಿದ್ದರೂ ಪೂರ್ವಪುಣ್ಯಶೇಷವಿದ್ದರೆ ತಾಸಿದ್ದಕಡೆಯಲ್ಲಿಯೇ ಸರ್ವ ಸಂತೋಷವನ್ನುಂಟುಮಾಡುವನು. ಈಗ ನನ್ನ ಸ್ಥಿತಿಯು ಅತಿ ಹೇಯವಾಗಿದ್ದರೂ ರಾಜಕುಮಾರಿಯಾದ ಆನಂದವತಿಯು ಪ್ರತಿದಿನವೂ ನನಗೆ ಅನ್ನೋದಕಗಳಿಂದ ತೃಪ್ತಿಪಡಿಸುತ್ತಿರುವಳು. ನನಗೆ ಹಸಿವೆಯಾದರೊ ಬಹಳವಾಗಿರುವುದು. ಇಷ್ಟಾದರೂ ಆಕೆಯು ಬರಲಿಲ್ಲವಲ್ಲ. ಆಕೆಯು ಬಂದರೆ ಇದೊ ಈ ಚಾವಟಿಯಿಂದಲೇ ಹೊಡೆದು ನನ್ನ ಕೋಪವನ್ನು ಶಾಂತಿಗೊಳಿಸಿಕೊಳ್ಳುವೆನು.

---

* ರಾಗ—ಭೈರವಿ ರೂಪಕ.

ನಾಮಾಡಿದಕರ್ಮ ಫಲವಿದ । ನೇನೆಂಬೆನಕ್ಕಟ ॥ ಪ ॥ ಭೂಮಿಪಾಲನನು ನೋಡದೆ ತೊಳಲುವೆನು ॥ ಅ ॥ ಇದಕಾವಯೋಚನೆ ಗೈದರು । ಹದನೇನುಕಾಣೆನು ಕೋಟಿಯಿಂ ॥ ಮುದವಿಂದಪೋಗಲು ನೂಕಿಕಳುಹಿದರು ॥೧॥ ಪರಮಾಪ್ತನಾದ ಭೂಮಿಪ । ವರಮಿತ್ರನನು ನೋಡದೆ । ಧರೆಯೊಳಕ್ಕಟ ಬಾಳಲರಿಯೆನು ॥ ೨ ॥

## ವಸಂತಮಿತ್ರನ ಪ್ರವೇಶ.

ವಸಂತಮಿತ್ರ. ಯಾರೋ ಮಾತನಾಡುವಂತಿದೆ. (ಅತ್ತಿತ್ತನೋಡಿ) ಇದೇನು ಇಲ್ಲಿ ಒಬ್ಬ ಕುಂಟನು ಕೂತಿರುವನು ! ಈ ಕುಟೀರದಲ್ಲಿ ಋಷಿ ಇರಬಹುದೆಂದು ಭಾವಿಸಿದ್ದೆ. ಇವನ ಉಡುಪಿನಿಂದ ಈತನ ವೃತ್ತಿಯೋ ಬೇರೆಯಾಗಿರುವುದೆಂದು ಭಾವಿಸಬೇಕಾಗಿರುವುದು. ಒಳ್ಳೇದು, ಮರೆಯಾಗಿನಿಂತು ಈತನು ಆಡುವ ಮಾತುಗಳನ್ನು ಮೊದಲು ಲಾಲಿಸಿ, ಅನಂತರ ಮುಂದಣಾಯೋಚನೆ ಮಾಡುವೆನು.

(ಮರೆಯಾಗಿ ನಿಲ್ಲುವನು)

ಕುಂಟ. ಅಯ್ಯೋ ನೀಚಳೆ, ಇನ್ನೂ ನೀನು ಬರಲಿಲ್ಲವೆ. ಸೌಗಂಧಿಕನನ್ನು ಮದುವೆ ಮಾಡಿಕೊಂಡೆಯೆಂದು ಕೇಳಿದೆ. ಅದರ ಅಹಂಕಾರದಿಂದಲೇ ನನ್ನನ್ನು ಮರೆತುಬಿಟ್ಟೆಯೋ ?

ವಸಂತಮಿತ್ರ. ಈತನರೂಪು, ಆಡಿದಮಾತು ಇವುಗಳನ್ನು ಕೇಳಿದರೆ ಎಷ್ಟು ಸಂಕಟಕರವಾಗಿರುವುದು. ಈ ಕುರೂಪಿಯು ಆ ರಾಜನ ಮಗಳಾಗಿಯೂ, ನನ್ನಪ್ರಿಯಮಿತ್ರನ ಪೆಂಡತಿಯಾಗಿಯೂ— ಛೀ ನಾನು ಉಚ್ಚರಿಸಬಾರದು, ಈತನಿಂದ ಶಿಕ್ಷೆಯನ್ನು ಹೇಗೆತಾನೆ ಸಹಿಸಿಕೊಂಡಿರುವಳು ಸ್ತ್ರೀಯರ ವ್ಯಾಪಾರವು ಯಾರಿಗೆತಾನೆ ತಿಳಿಯುವುದು. ಆ ಋಷಿಯು ಹೇಳಿದವನು ಇವನೇ ಆಗಿರಬಹುದೆ ! ಒಳ್ಳೇದು ಇನ್ನೂ ಕೇಳುವೆನು.

(ಆನಂದವತಿಯು ತಟ್ಟೆಯಲ್ಲಿ ಫಲಹಾರದ ಸಾಮಗ್ರಿಗಳನ್ನು ತರುವಳು)

ಆನಂದವತಿ. ಪ್ರಿಯನೆ ? ಹೊತ್ತುಮಾಡಿಕೊಂಡುಬಂದ ನನ್ನ ಅಪರಾಧವನ್ನು ಕ್ಷಮಿಸು. ಈ ಪಕ್ವಪದಾರ್ಥಗಳನ್ನು ಸ್ವೀಕರಿಸು.

(ವಿನಯದಿಂದ ತಟ್ಟೆಯನ್ನು ಮುಂದಿಡುವಳು)

ವಸಂತಮಿತ್ರ. ಈಕೆಯ ವಿನಯವೂ ಆ ನೀಚನಲ್ಲಿರುವ ವಿಶ್ವಾಸವೂ ಅನಿರ್ವಚನೀಯವಾಗಿರುವುದು. (ನಿಟ್ಟುಸಿರು ಬಿಡುವನು)

ಕುಂಟ. ಛೀ, ಭ್ರಷ್ಟಳೆ ? ಹಸಿವಿನಿಂದ ತೊಳಲಿ ಬಳಲುತ್ತಿದ್ದಾಗ್ಗೂ ಯೋಚಿಸದೆ, ನಾನು ವ್ಯಥೆಪಡುವಂತೆ ಮಾಡಿದ ನಿನ್ನ ತಿಂಡಿಗಳಿಗೆ ಬೆಂಕಿಯನ್ನು ಹಾಕು. (ಒದೆಯುವನು)

ವಸಂತಮಿತ್ರ. ವಿಧಿಯೆ, ಮನ್ಮಥನಂತಿರುವ ಪತಿಯಲ್ಲಿ ಅನುರಾಗ ವಿಡದೆ ಅವನಿಗೆ ಮೋಸಪಡಿಸಿ, ಈ ನೀಚನಿಂದ ಒದೆಯಿಸಿಕೊಳ್ಳುವ ಪುಣ್ಯವನ್ನು ಎಷ್ಟೆಂದು ವರ್ಣಿಸಲಿ. ಇದನ್ನು ನೋಡಿದ ನನ್ನಕಣ್ಣು ಗಳು ಇನ್ನೂ ಹಾಳಾಗಲಿಲ್ಲವಲ್ಲ. (ಹಣೆಯನ್ನು ಬಡಿದುಕೊಳ್ಳುವನು.)

ಆನಂದವತಿ. * ಪ್ರಿಯನೆ, ನನ್ನ ಅಪರಾಧವನ್ನು ಕ್ಷಮಿಸು.

ವಸಂತಮಿತ್ರ. "ಪ್ರಿಯನೆ" ಎಂದು ಕಪಟದಿಂದ ಕರೆಯುವ ಈ ಧ್ವನಿಯನ್ನು ಸೂಚಿಸುವ ನಿನ್ನ ನಾಲಿಗೆಯು ಇನ್ನೂ ಏಕೆ ಹಾಳಾ ಗಲಿಲ್ಲ.

ಆನಂದವತಿ. ನಿರ್ಬಂಧಕ್ಕೆ ಸಿಲುಕಿರುವಾಗ್ಗೆ ನನ್ನಪತಿಗೆ ಪತಿವ್ರತೆ ಯಳೆಂತಲೂ, ಪತಿಯಲ್ಲಿ ವಿಶ್ವಾಸವಿರುವುದೆಂತಲೂ ತೋರ್ಪಡಿಸಿ ಕೊಂಡು ನಿನ್ನ ಸನ್ನಿಧಾನಕ್ಕೆ ಬರುವುದೇ ಹೊತ್ತಾಯಿತು. ನನ್ನ ನಿರ್ಬಂಧವೆಂಬ ಆನೆಗೆ ಸಿಂಹಪ್ರಾಯನಾದ ನೀನು ಇರುವಾಗ್ಗೆ ನನ್ನ ಪತಿಯಮೇಲಣ ಮೋಹವೆಂಬ ಬಲೆಯು ನಿನ್ನನ್ನು ಸೆರೆವಿಡಿ ಯಲು ಸಾಧ್ಯವೆ?

ವಸಂತಮಿತ್ರ. ಅಯ್ಯೊ, ಅನ್ಯಾಯಪ್ರಪಂಚವೆ, ಸೈರಿಸುವುದಕ್ಕಾ ಗುವುದಿಲ್ಲವಲ್ಲ, ಏನುಮಾಡಲಿ.

ಕುಂಟ. ಮದುವೆಮಾಡಿಕೊಂಡಮೇಲೆ ನನ್ನ ಆಶೆಯೇಕೆ.

(ಅಳುವನು.)

ಆನಂದವತಿ. ಅಳಬೇಡ, ಧೈರ್ಯವಾಗಿರು. (ಸೆರಗಿನಿಂದ ಆತನ ಕಂಬ ನಿಗಳನ್ನು ಒರೆಸುವಳು) ಸುಂದರಾಂಗನೆ, ಬಲಾತ್ಕಾರದಿಂದ ಮಾಡಿದ ಮದುವೆಗೆ ಬೇರೊಂದುಪಾಯವನ್ನು ಕಲ್ಪಿಸಿರುವೆನು. ಏಕೆಂದರೆ, ಗಂಡಸರು ಸ್ತ್ರೀಯರ ಮನೋಗತದಂತೆ ನಡೆಯದಿದ್ದರೆ ತಮಗೆ ಎಷ್ಟೇ ಕಷ್ಟವಾದರೂ ಸಹಿಸಿಕೊಂಡಿದ್ದು, ಕೊನೆಗೆ ತಮ್ಮ ಮನೋ

---

* ರಾಗ. ತಾಳ.

ವರಸುಮಶರ ಸಮ ಇನಿಯನೆ ಕ್ಷಮಿಸೈ । ಮಮಮಾನಸಹಂಸ ॥ ಪ॥
ನಾಗಸುವೇಣಿಯು । ಭೋಗವಸ್ತುಗಳ । ರಾಗದಿಂದ ತಂದಿಹೆನು ॥ ಬೇಗ ದೊಳ್ಬಾರ್ದಪರಾಧವ ಮನ್ನಿಸಿ । ನೀಗುಮನದದುಗುಡಂ ॥೧॥

ಭಿಲಾಷೆಗಳನ್ನು ಪೂರೈಸಿಕೊಳ್ಳುವರೆಂದು ನೀನು ಚೆನ್ನಾಗಿ ತಿಳಿ. ಈ ದಿವಸ ಇಷ್ಟುಹೊತ್ತಾಗಿಬಂದ ಅಪರಾಧವನ್ನು ಕ್ಷಮಿಸು.

ವಸಂತಮಿತ್ರ. ಅಯ್ಯೋ, ನೀಚಳೆ. ಈ ಕುರೂಪಿಗೆ ಇಷ್ಟು ವಿನಯದಿಂದ ಬೇಡಿಕೊಳ್ಳುವುದಕ್ಕೆ ನಿನ್ನಮನಸ್ಸು ಹೇಗೆಬಂತು. ಪ್ರೀತಿಗೆ ಪಾತ್ರವಾದ ಪದಾರ್ಥವು ಎಷ್ಟು ಹೇಯವಾಗಿದ್ದರೂ ಅದೇ ಮನಸ್ಸಿಗೆ ಇಂಪಾಗಿರುವಂತೆ ತೋರುವುದೇ ಕಾಮುಕರ ಮನೋಭಾವವು.

ಕುಂಟ. ನೀನು ಮದುವೆಯಾದವನ ಹೆಸರೇನು ?

ಆನಂದವತಿ. ಯಾವನೋ ಒಬ್ಬ ಸೌಗಂಧಿಕನಂತೆ ; ಮಲ್ಲಿಕಾಲತೆಯು ಮುಳ್ಳಿನ ಬೇಲಿಯನ್ನಾಶ್ರಯಿಸಿದಂತಾಯಿತು. ನಾನು ಒಂದು ಉಪಾಯವನ್ನು ಕಲ್ಪಿಸಿರುವೆನು.

ವಸಂತಮಿತ್ರ. ನನ್ನಮಿತ್ರನ ಪ್ರಾಣವನ್ನು ನಾಶಪಡಿಸಲು ಯೋಚಿಸಿರುವಳೊ ಏನೋ ಕಾಣೆನಲ್ಲ.

ಕುಂಟ ನೀನು ಯೋಚಿಸಿರುವ ಉಪಾಯವೇನು ?

ಆನಂದವತಿ. ಅವನನ್ನು ಕೊಲ್ಲುವುದೇ ಉಪಾಯ.

ವಸಂತಮಿತ್ರ. ಕೊಲ್ಲುವೆನೆಂದು ನುಡಿಯುವ ನಿನ್ನ ನಾಲಿಗೆಯು ಇನ್ನೂ ಏಕೆ ಹಾಳಾಗಲಿಲ್ಲ.

ಕುಂಟ ಆತನು ಸುಂದರನಲ್ಲವೆ ?

ವಸಂತಮಿತ್ರ. ನಿನ್ನಷ್ಟು ಸುಂದರನು ಮಾತ್ರವನಿರುವನು ?

ಆನಂದವತಿ ಸುಂದರನಾದಮಾತ್ರಕ್ಕೆ ಏನು, ಹೆಂಗಸರು ಪ್ರೀತಿಯನ್ನು ಆತನಲ್ಲಿ ಇಡುವುದೆಂದರೇನು ?

ವಸಂತಮಿತ್ರ. ನಿಜ, ನಿಜ, ಹೇಳತಕ್ಕದ್ದೇನು.

ಕುಂಟ ಅವನನ್ನು ಹೇಗೆಕೊಲ್ಲುವೆ ?

ವಸಂತಮಿತ್ರ. ಛೀ ಪಾಪಿಯೆ, ಇದಕ್ಕೆ ನೀನೂಕೇಳಿ ಸಲಹೆಗಳನ್ನು ಹೇಳಿಕೊಡುವೆಯಾ ?

ಆನಂದವತಿ ಗರ್ಭಾಧಾನ ಮಹೋತ್ಸವವು ಈ ದಿವಸ ರಾತ್ರಿ ೧೨ ಗಂಟೆಗೆ ನೆರವೇರುವುದು. ಅವನು ನಿದ್ರೆಮಾಡುವ ಸಮಯದಲ್ಲಿ ನನ್ನ ಕೋರಿಕೆಯನ್ನು ನೆರವೇರಿಸಿಕೊಳ್ಳುವೆನು.

ಕುಂಟ. ಎಲೆ, ಪಾತಕಿ, ಮಾಯಾವತಿ, ನಿರಪರಾಧಿಯಾದ ಆ ರಾಜಕುಮಾರನನ್ನು ನನಗೋಸುಗ ಕೊಂದುಹಾಕುವೆಯಾ ?

ವಸಂತಮಿತ್ರ. ದೈವಯೋಗದಿಂದ ಈತನಿಗೆ ಮರುಕವುಂಟಾಯಿತು ; ಏನುಹೇಳುವನೋ ಕೇಳುವೆನು.

ಕುಂಟ. ಎಲೆ, ನೀಚಳೆ, ಇದುವರೆಗೆ ನನಗೆ ಸಕಾಲಕ್ಕೆಬಂದು ಊಟದಿಂದ ತೃಪ್ತಿಪಡಿಸುತ್ತಿದ್ದೆ. ಪತಿಯ ಪ್ರೀತಿಯೆಂಬ ಪುಷ್ಪವನ್ನು ಮುಡಿದು, ನಾಚಿಕೆಯೆಂಬ ಗಂಧವನ್ನು ಲೇಪಿಸಿಕೊಂಡು, ಸದ್ಗುಣಗಳೆಂಬ ಆಭರಣಗಳನ್ನಿಟ್ಟುಕೊಂಡು, ಪತಿವ್ರತಾಧರ್ಮವೆಂಬ ಸೀರೆಯನ್ನುಟ್ಟು ಕಾಲವನ್ನು ಕಳೆಯುವವಳಿಗೆ ಸಮಾನರಾದವರು ಯಾರೂ ಇಲ್ಲ. ಆದುದರಿಂದ ದುರ್ಮಾರ್ಗಕ್ಕೆ ಮನಸ್ಸುಕೊಡದೆ ಪತಿಯ ಪ್ರೀತಿಗೆ ಪಾತ್ರಳಾಗಿರು, ನಡೆ.

ಆನಂದವತಿ. ಏನುಹೇಳಿದೆ, ಮತ್ತೊಂದುಸಾರಿ ಹೇಳು ?

ಕುಂಟ. ಪತಿಯನ್ನೇ ಕೊಲ್ಲುವುದಕ್ಕೆ ಉದ್ಯುಕ್ತಳಾಗಿರುವಾಗ್ಗ ನೀನು ನನ್ನನ್ನು ಬಿಡುವೆಯಾ ಎಂದು ಹೇಳಿದೆ.

ಆನಂದವತಿ. ಎಲೋ, ಕುಂಟನೆ, ನಿನ್ನ ಯೋಗ್ಯತೆಯನ್ನು ಈಗ ತೋರಿಸಿದೆಯಾ ! ನಿನಲ್ಲಿ ನನ್ನ ಪ್ರೀತಿಯನ್ನಿಟ್ಟು ಸೌಖ್ಯದಿಂದಿರಬೇಕೆಂದು ಯೋಚಿಸಿ, ನನ್ನ ಕಷ್ಟವನ್ನು ಯೋಚಿಸದೆ ಈ ನಿಶಿಯಲ್ಲೂ ಸುರಂಗಮಾರ್ಗವಾಗಿ ಬಂದು, ಆಹಾರವನ್ನು ತಂದುನಿನ್ನನ್ನು ತೃಪ್ತಿಗೊಳಿಸುತ್ತಿದ್ದರೂ ಕೊನೆಗೆ ಇಂತಹ ಮೋಸ ಮಾಡಿದೆಯಾ ! ಹೆಂಗಸರು ಸೌಖ್ಯಕ್ಕೆ ಆಶೆಪಟ್ಟು ಪತಿಯನ್ನು ತ್ಯಜಿಸಿ, ಪರಪುರುಷನಲ್ಲಿ ನಿಜವಾದ ವಿಶ್ವಾಸವಿಟ್ಟಾಗ್ಯೂ, ಆತನು ಆಕೆಯು ತೋರಿಸುವ ಕಾರ್ಯವೆಲ್ಲಾ ಕೃತ್ರಿಮಗಳೆಂದು ಭಾವಿಸಿ, ಹೆಂಗಸರನ್ನು ನಂಬಿಸಿ ಕೊನೆಗೆ ಮೋಸಪಡಿಸುವನೆಂದು ಹೇಳುವುದಕ್ಕೆ ನೀನೇ ದೃಷ್ಟಾಂತವು.

ವಸಂತಮಿತ್ರ. ಕುಂಟನು ಈ ರಾಕ್ಷಸಿಗೆ ಹೆದರಿಕೊಂಡು ಒಪ್ಪಿಕೊಳ್ಳುವನೊ, ಕುಂಟನಾಗಿದ್ದರೂ ತನ್ನ ಪೌರುಷವನ್ನು ತೋರಿಸುವನೊ ಕಾಣೆ.

ಕುಂಟ. ಲೋಕದಲ್ಲಿ ಪತಿಯಮೇಲಣ ಅನುರಾಗವಿಲ್ಲದ ಸ್ತ್ರೀಯರಿಗೆ ದುರ್ಮಾರ್ಗನೇ ದೊರೆಯುವನು. ಏಕೆಂದರೆ ವಿವೇಕಿಗೆ ಅಕಸ್ಮಾತ್ತಾಗಿ ಅಂತವಳ ಸಹವಾಸಬಿದ್ದರೆ ಕೂಡಲೆ ಆತನು ತಪ್ಪಿಸಿಕೊಳ್ಳುವನು. ಪತಿಯನ್ನು ನಾಶಮಾಡಬೇಕೆಂಬ ಬುದ್ಧಿಯು ನಿನಗೆ ಹುಟ್ಟಿರುವಾಗ್ಗೆ, ನಿನಗೆ ಮೋಸಪಡಿಸಬೇಕೆಂಬ ಬುದ್ಧಿಯು ನನಗೆ ಉಂಟಾಗುವುದು ಒಂದು ಹೆಚ್ಚೆ ? ಇಂತಹ ಯೋಚನೆಯಿಂದ ನಿನ್ನ ಪರಿಣಾಮವು ಅತಿ ಹೇಯವಾಗುವುದು. ಛೀ ! ನೀಚಳೆ, ನಡೆ.

ವಸಂತಮಿತ್ರ. ನೀಚರಿಗೆ ಒಂದಾನೊಂದುಕಾಲದಲ್ಲಾದರೂ ಒಳ್ಳೇ ಬುದ್ಧಿಯುಂಟಾಗದೇ ಇರುವುದಿಲ್ಲ. ಒಳ್ಳೇದು, ಇವನು ಏನು ಹೇಳುವನೊ ಕೇಳುವೆನು.

ಆನಂದವತಿ. ಎಲೋ, ಪಾಪಿ, ನಿನ್ನ ಧರ್ಮಬೋಧನೆಯನ್ನು ಕೇಳುವುದಕ್ಕೆ ನಾನು ಬರಲಿಲ್ಲ. ಶ್ರಮಪಟ್ಟು ನಿನಗೆ ಮಾಡುತ್ತಿದ್ದ ಉಪಚಾರಗಳೆಲ್ಲಾ ವ್ಯರ್ಥವಾದವೆ ; ನಾನು ಹೇಳುವುದಕ್ಕೆ ನೀನು ಒಡಂಬಡುವಹಾಗಿಲ್ಲವೊ ?

ಕುಂಟ. (ಸ್ವಗತ) ಇಷ್ಟು ಖಂಡಿತವಾದಮಾತಿಗೆ ತಕ್ಕ ಉಪಾಯವಾದ ಮಾತುಗಳಾಡದಿದ್ದರೆ ನಾನು ಬದುಕುವ ಆಶೆಯೇ ತೋರುವುದಿಲ್ಲ. ಪ್ರಿಯೆ, ಮನಸ್ಸಿಗೆ ಒಡಂಬಡದ ಕಾರ್ಯವನ್ನು ನಾನು ನಡಿಸಬೇಕಲ್ಲ ಎಂಬಶಂಕೆಯಿಂದ ಆಡಿದೆ. ಒಳ್ಳೇದು ನಿನ್ನಂತೆ ನಡೆದುಕೊಂಡರೆ ಇನ್ನೂನನಗೆ ಸಂತೋಷವನ್ನುಂಟುಮಾಡುವೆಯಲ್ಲವೆ ? ಒಳ್ಳೇದು, ಹಾಗೆಯೇಆಗಲಿ.

ಆನಂದವತಿ. * ಪ್ರಿಯನೆ, ಈಗ ನನ್ನ ಮನಸ್ಸಿನ ವ್ಯಾಕುಲವು ಪರಿಹಾರವಾಯಿತು.

---

* ರಾಗ—ಭೈರವಿ. ರೂಪಕ.

ಆನಂದ. ಇಂದುಧನ್ಯಳಾದೆ । ಸುಂದರಾಂಗನೆನಾ ॥ ಚಂದದಿಂದಸದಾ ।
ನಂದವಗೊಳಿಪೆ ॥ ೧ ॥

ಕುಂಟ. ದುರುಳವಾಕ್ಯವ । ತರವೆಪೇಳುವುದು ॥ ಹರಣಪೋಪುದನು ।
ಮರೆಯಬೇಡಖೂಳೆ ॥ ೨ ॥

ಕುಂಟ. ನಿನ್ನ ಮನೋವ್ಯಾಕುಲವು ಈಗಲೇ ನಾಶವಾದೀತೆ.

ಆನಂದವ೨. ಕೊನೆಗೂ ನಿನ್ನ ಹಠವನ್ನು ಬಿಡುವುದಿಲ್ಲವೊ? ನೀಚನೆ. ಇದೋ, ಈ ವಸ್ತ್ರದಿಂದಲೇ ನಾನು ನೇಣುಹಾಕಿಕೊಂಡು ಗಟ್ಟಿಯಾಗಿಕೂಗಿ ನನ್ನನ್ನು ಮಾನಹಾನಿಗೈಯಲು ಬಂದಿರುವ ನೆಂದುಹೇಳಿ ನಿನ್ನ ಪ್ರಾಣವನ್ನು ತೆಗೆಯಿಸುವೆನು ನೋಡು. (ಎಂದು ನೇಣುಹಾಕಿಕೊಳ್ಳುವುದಕ್ಕೆ ಪ್ರಯತ್ನಿಸುವಳು.)

ವಸಂತಮಿತ್ರ. ಈಗ ಈ ಕುಂಟನು ಸುಮ್ಮನಿದ್ದರೆ ಲೋಕ ಕ್ಕೆಲ್ಲಾ ಉಪಕಾರವನ್ನು ಮಾಡಿದಂತಾಗುವುದು.

ಕುಂಟ. ಏನುತಾನೆಮಾಡಲಿ, ಹಾಳಾದಮನಸ್ಸು ಮುಂದಕ್ಕೆ ಹೋದರೂ ಈ ದೇಹವು ಕೂತಕಡೆಯಲ್ಲಿಯೇ ಇರಬೇಕಾಗಿರುವು ದಲ್ಲ. ಹಾ, ದೇವರೆ, ನಾನು ಹಿಂದೆಮಾಡಿದ ಪಾಪಕೃತ್ಯಕ್ಕ ನಾನು ಇಂತಹ ವೃತ್ತಿಯನ್ನಾಶ್ರಿಸಿಕೊಂಡಿರುವಂತೆ ಮಾಡಿರುವುದಲ್ಲದೆ, ಈಕೆಯ ಕೋಪಾಗ್ನಿಯಲ್ಲಿ ಬಿದ್ದು ಪ್ರಾಣಬಿಡುವಂತೆ ಮಾಡುವೆಯೊ ಕಾಣೆನಲ್ಲ. ಪ್ರಿಯೆ, ನಾನು ಇದುವರೆಗೂ ಆಡಿದ ಮಾತುಗಳು ನಿಜ ವೆಂದುನಂಬಿ ಇಂತಹ ಘೋರಕೃತ್ಯಕ್ಕೆ ಪ್ರಯತ್ನಿಸುವರೆ? ಇದೇನೊ ನಿನ್ನಪ್ರೀತಿಯು. ಚೆನ್ನಾಯಿತು! ಚೆನ್ನಾಯಿತು!! ಈಗ ನಿನಗೆ ನನ್ನಲ್ಲಿ ವಿಶೇಷ ಪ್ರೀತಿಯಿರುವುದೆಂದು ಗೊತ್ತಾಯಿತು. ನಾನು ನಿನ್ನನ್ನು ನಿರಾ ಕರಿಸಿದ ಅಪರಾಧವನ್ನು ಕ್ಷಮಿಸು.

---

ಆನಂದ. ಮಾರಕೇಳಿಗೆಸಾಂ । ಸಾರಿಬಂದಿಹೆನು ॥ ಪೀರುಕೆಂದುಟಿಯು । ಸಾರವನೀರನೆ ॥ ೩ ॥

ಕುಂಟ. ಸುಗುಣನೆಂದುನಾ । ಬಗೆಯದಿಂತುನುಡಿವೆ ॥ ಜಗವುನಿನ್ನ ನೋಡಿ । ನಗರೆಪೇಳೆಬೂಳೆ ॥ ೪॥

ಆನಂದ. ನಾಗವೇಣಿನಾನು । ಭೋಗಭಾಗ್ಯವಿತ್ತು ॥ ನೀಗಿದುಃಖ ನನ್ನು । ರಾಗದಿಂದಪೊರೆವೆ ॥ ೫ ॥

ಕುಂಟ. ಕಾಂತನಲ್ಲನಾನು । ಇಂತುಕಾಡಿನಿರಯು ॥ ವೆಂತುಸೇರುವೆನೀ । ಭ್ರಾಂತಚಿತ್ತೆಪೋಗು ॥ ೬ ॥

ಆನಂದ. ಹೇಯುವಚನವಾಡಿ । ಶ್ರೇಯುವೆಂತುತಾಳ್ವೆ ॥ ಮಾಯುದಿಂದ ನಿನ್ನ । ಬಾಯಬಿಡಿಸುವೆ ॥ ೭ ॥

ಆನಂದವತಿ. ಪ್ರಿಯನೆ, ಈಗ ಸಂತೋಷವಾಯಿತು. (ಆಲಿಂಗಿಸಿಕೊಳ್ಳುವುದಕ್ಕೆ ಹೋಗುವಳು)

ಕುಂಟ. ಪ್ರಿಯೆ, ಸ್ವಲ್ಪದೂರದಲ್ಲಿರು. ಏಕೆಂದರೆ ನೀನುಮಾಡುವ ಕಾರ್ಯವು ನಿರ್ವಿಘ್ನವಾಗಿ ನೆರವೇರಿದಮೇಲೆ ಉಭಯತ್ರರೂ ಪಡುವ ಆನಂದಕ್ಕೆ ಪಾರವೇ ಇರುವುದಿಲ್ಲ. ನಾನು ವಿಶ್ರಮಿಸಿಕೊಳ್ಳುವುದಕ್ಕೆ ಹೋಗುವೆನು. (ಮರೆಯಾಗಿಹೋಗುವನು.)

ಆನಂದವತಿ. ಪ್ರಿಯನೆ, ಜಾಗ್ರತೆಯಾಗಿಬರುವೆನು. ಕೋಪವಮಾಡಬೇಡ. (ಹೊರಡುವಳು)

ವಸಂತಮಿತ್ರ. ಆ ನೀಚಳು ನನ್ನಮಿತ್ರನ ಪ್ರಾಣವನ್ನು ತೆಗೆಯುವುದಕ್ಕೆ ಹೊರಟಿರುವಳು. ನಾನೂ ನನ್ನಪ್ರಾಣದಮೇಲಣ ಆಶೆಯನ್ನು ತ್ಯಜಿಸಿ, ಮಿತ್ರನ ಜೀವವನ್ನು ಕಾಪಾಡುವೆನು.

(ಆನಂದವತಿಯಹಿಂದೆ ಸುರಂಗದಮಾರ್ಗವಾಗಿ ಹೊರಡುವನು)

---

ಸ್ಥಾನ ೩.—ಶಯ್ಯಾಗೃಹ.

ಸೌಗಂಧಿಕನು ಮಲಗಿರುವನು.

(ವಸಂತಮಿತ್ರನ ಪ್ರವೇಶ.)

ಕಂದ ॥ ಸುರಭಿಳ ಸುಮಂಗಳಿಂಭಾ
ಸುರತರ ಶಯ್ಯಾಸನಂಗಳೊಳ್ ಪರಪಿರ್ಪ್ಪ ॥
ಶರಜಪ ರಾಗಗಳಿಂಕ
ಸ್ತುರಿ ಪನಿನೀರ್ಗಳ ಮನೋಜ್ಞಗಂಧದಿ ನೆಸೆಗುಂ ॥ [೩೪]

ವಸಂತಮಿತ್ರ. ಈ ಶಯ್ಯಾಗೃಹವು ಎಷ್ಟು ಮನೋಹರವಾಗಿರುವುದು. (ಸುತ್ತಲೂ ನೋಡಿ) ಈ ಸ್ಥಳದಲ್ಲಿ ಕಾಣಿಸುವ ಎಲ್ಲಾ ವಸ್ತುಗಳೂ ಎಷ್ಟೋ ಮನೋಹರವಾಗಿರುವಂತೆ ಕಾಣಬರುತ್ತಿದ್ದರೂ, ಎಲ್ಲಾ ಕೃತ್ರಿಮಮಯವಾಗಿರುವಂತೆ ಮನಸ್ಸಿಗೆ ಹೊಳೆಯಲು ಕಾರಣವೇನು. ನನ್ನಮಿತ್ರನು ಇಲ್ಲಿಯೇ ಮಲಗಿರುವನು. ಮಿತ್ರನೆ, ನನ್ನನ್ನು ನೋಡಬಾರದೆಂಬ ದ್ವೇಷದಿಂದ ಕಣ್ಣುಗಳನ್ನು ಮುಚ್ಚಿಕೊಂಡಿರುವೆಯಾ? ಚಿಂತೆಯಿಲ್ಲ. ನಿನ್ನನ್ನು ನೋಡಿದ ನನ್ನ ಕಣ್ಣು

ಗಳು ಸಾರ್ಥಕಗಳಾದವು. ಆಕೆಯು ಬರುವ ಹೊತ್ತಾಯಿತು. ಮರೆಯಲ್ಲಿಯೇನಿಂತು ಮಾಡುವುದನ್ನುನೋಡಿ ಮುಂದಕ್ಕೆಯೋಚಿಸುವೆನು.

(ಮರೆಯಲ್ಲಿ ನಿಲ್ಲುವನು)

## ಆ ನ ೦ ದ ವ ತಿ ಯ ಪ್ರ ವೇ ಶ .

ಆನಂದವತಿ. ಈಗ ನನ್ನಪತಿಗೆ ನಿದ್ದೆಬಂದಿರುವುದು. ಸುಮ್ಮನಿರಬಾರದು. ನಾನು ಪತಿವ್ರತೆಯಳೆಂತಲೂ, ನನಗೆ ಪತಿಯಲ್ಲಿ ಪ್ರೀತಿ ಇರುವುದೆಂತಲೂ ನಟನೆಯನ್ನು ತೋರಿಸುವೆನು. ಇದು ಹಾಗಿರಲಿ, ಈಗ ನಾನು ಗೋಪ್ಯದಲ್ಲಿ ನಡೆಯಿಸಿಬಂದ ಕೃತ್ಯವು ಯಾರಿಗೂ ತಿಳಿಯದು.

ವಸಂತಮಿತ್ರ. ನನ್ನಹೊರತಾಗಿ ಮತ್ತಾರಿಗೂ ತಿಳಿಯದು ನಿಜವೇ.

ಆನಂದವತಿ. ಪ್ರಿಯನೆ, ಏಳು, ಏಳು, ನನ್ನಮೇಲೆ ಕೋಪವೆ ?

ಸೌಗಂಧಿಕ. ಪ್ರಿಯೆ, ಸ್ವಲ್ಪತಾಳು. ನನ್ನಚಿತ್ತವು ಆ ಮಿತ್ರದ್ರೋಹಿಯಾದ ವಸಂತಮಿತ್ರನನ್ನು ನೆನಸಿಕೊಂಡೇ ಆಯಾಸವಾಗಿದೆ.

ವಸಂತಮಿತ್ರ. ಮಿತ್ರನೆ, ನನ್ನನ್ನು ಇಂತಹ ಕಾಲದಲ್ಲಿ ಸ್ಮರಿಸಿಕೊಂಡೆಯಲ್ಲ.. ಸಾಕು, ಬೈದರೂ ಚಿಂತೆಯಿಲ್ಲ. ದೇವರು ನಿನ್ನನ್ನು ಕಾಪಾಡಲಿ.

ಆನಂದವತಿ ಪ್ರಾಣಕಾಂತನೆ, ಕೆಲವರು ಹೆಂಡರಿಗಿಂತಲೂ ಮಿತ್ರನನ್ನೇಪ್ರೀತಿಸಿ ಅವನನ್ನು ಎಡೆಬಿಡದಿರುವರು ಆ ನೀಚರು ಮಾಡುವ ಕೃತ್ರಮ ಸಂಧಾನಕಿಂತಲೂ ಹೆಂಡಿರು ನೀಚರೆ ಹೇಳು.

ವಸಂತಮಿತ್ರ. ಅದಕ್ಕೆ ಸಂದೇಹವೇನು ? ನೀನು ಯೋಗ್ಯಳೊ, ನಾನು ಯೋಗ್ಯನೊ ದೇವರೇ ಸಾಕ್ಷಿಯು.

ಆನಂದವತಿ. ಪ್ರಿಯನೆ, ಇಂತಹ ಸಂತೋಷದಕಾಲದಲ್ಲಿ ಸುಮ್ಮನಿರುವುದು ಧರ್ಮವಲ್ಲ. ಈ ಪಕ್ವಪದಾರ್ಥಗಳನ್ನು ತಂದಿರುವೆನು. ಫಲಹಾರಮಾಡು.

ವಸಂತಮಿತ್ರ. ಈ ನೀಚಳು ಈ ಪದಾರ್ಥಗಳಲ್ಲಿ ವಿಷವನ್ನೇನಾದರೂ ಬೆರಸಿ ತಂದಿರುವಳೊ ಏನೋ ಕಾಣೆನಲ್ಲ. ಮುಂದೇನುಗತಿ ? ನನ್ನಮಿತ್ರನು ಮೋಸಹೋಗುವನೊ. ದೇವರೆ, ನೀನು ಕಾಪಾಡು.

ಆನಂದವತಿ ಪ್ರಾಣಪದಕವೆ, ನನ್ನಮೇಲೆ ಕೋಪವೆ?

ಸೌಗಂಧಿಕ. ಇಲ್ಲ, ಈ ದಿವಸ ತಲೆ ನೋಯುತ್ತಿರುವುದು. ಫಲಹಾರವು ಬೇಡ.

ವಸಂತಮಿತ್ರ. ದೇವರೆ, ನೀನು ಆತನಿಗೆ ಪ್ರೇರೇಪಿಸಿ ಬೇಡವೆಂದು ಹೇಳಿಸಿದೆಯಲ್ಲ, ನನಗೆ ಸಂತೋಷವಾಯಿತು.

ಆನಂದವತಿ. ಹಾಗಾದರೆ ಈ ಹಾಲನ್ನಾದರೂ ಕುಡಿ.

ಸೌಗಂಧಿಕ. ಇದೂ ನನಗೆ ಬೇಡ.

ವಸಂತಮಿತ್ರ. ಇದರಲ್ಲಿಯೂ ನನ್ನಮಿತ್ರನು ಮೋಸಹೋಗಲಿಲ್ಲ. ಇನ್ನೂ ಏನುಹೇಳುವಳೊ ಕೇಳುವೆನು.

ಆನಂದವತಿ ನನ್ನಪ್ರಿಯನು ಒಂದಕ್ಕೂ ಒಪ್ಪಲಿಲ್ಲವಲ್ಲ. ಏನು ಮಾಡಲಿ. (ಯೋಚಿಸಿ) ಯೋಚನೆಯಾಕೆ. ಇದೊ, ಈ ಪುಷ್ಪಕ್ಕೂ ವಿಳ್ಯೆದೆಲೆಗೂ ಪಾಷಾಣವನ್ನು ಬೆರೆಸುವೆನು.

(ಎಂದು ತೋರಿಸುತ್ತಿರುವಳು.)

ವಸಂತಮಿತ್ರ. ಪುಷ್ಪಕ್ಕೂ ವಿಷಚೂರ್ಣವನ್ನು ಸವರುತ್ತಿರುವಳಲ್ಲ. ಅನ್ಯಾಯಪ್ರಪಂಚವೆ. ಈ ನೀಚಳ ಜನ್ಮವು ಯಾವದಕ್ಕೂ ಹೇಸತಕ್ಕುದಾಗಿಲ್ಲ.

ಆನಂದವತಿ ಪ್ರಿಯನೆ, ಹಾಗಾದರೆ ಈ ಗಂಧವನ್ನಾದರೂ ತೊಡೆಯುವೆನು; ಸ್ವೀಕರಿಸಬೇಕು.

ವಸಂತಮಿತ್ರ. "ನಿನ್ನ ಹೆಸರನ್ನೇ ತೊಡೆಯುವೆನು ಬಾ ಪ್ರಿಯನೆ." ಎಂದು ಕರೆಯುವ ನಿನ್ನ ಕಪಟಧ್ವನಿಯನ್ನು ದೇವರು ಇನ್ನೂ ಏಕೆ ಅಡಗಿಸಲಿಲ್ಲ.

ಸೌಗಂಧಿಕ. ಇದೂ ನನಗೆಬೇಡ ಹಿಂಸೆಮಾಡಿ ಪ್ರಯೋಜನವಿಲ್ಲ.

ಆನಂದವತಿ ಪ್ರಾಣಕಾಂತನೆ, ಕೊನೆಗೆ ಈ ಪುಷ್ಪವನ್ನಾದರೂ ಮುಡಿಸುವೆನು.

ಸೌಗಂಧಿಕ. ಇದೂ ನನಗೆ ಬೇಡ.

ವಸಂತಮಿತ್ರ. ಗಂಡನನ್ನುವಂಚಿಸಿ ಹೆಂಡಿರು ತಮ್ಮ ವಿಟನನ್ನು ಸಂತೋಷಪಡಿಸಬೇಕೆಂದು ನಟನೆಯಿಂದ ತೋರಿಸುವ ಪ್ರೀತಿಯುಕ್ತವಾದ ಕಾರ್ಯಗಳೆಲ್ಲಾ ವಂಚನೆಯೆಂದು ಭಾವಿಸಿದೆ, ಆ ವಿಟರೂ

ಕೃತ್ರಿಮವಾದ ಮೋಹದ ಬಲೆಗೆಸಿಕ್ಕಿ ಪ್ರಾಣಬಿಡುವರಲ್ಲ. ಅವರ ಜನ್ಮವನ್ನು ಸುಡಬೇಕು. ಇವಳು ನಿಜವಾದ ಪ್ರೀತಿಯನ್ನಿಟ್ಟಿದ್ದರೆ, ಆ ಕುಂಟನ ಪ್ರಾಣವನ್ನು ತೆಗೆಯಿಸುವೆನೆಂದು ಹೇಳಿ ನೇಣುಹಾಕಿಕೊಳ್ಳುವುದಕ್ಕೆ ಹೋಗುತ್ತಿದ್ದಳೆ.

ಆನಂದವತಿ. ನನ್ನ ಮೋಹನಾಂಗನು ಯಾವದಕ್ಕೂ ಒಪ್ಪಲಿಲ್ಲವಲ್ಲ. ಪ್ರಿಯನೆ ? ಈ ತಾಂಬೂಲವನ್ನಾದರೂ ಖಂಡಿತವಾಗಿ ಹಾಕಿಕೊಳ್ಳಬೇಕು. (ಎಂದು ಬಲಾತ್ಕಾರವಾಡಿ ಕೊಡುವಳು.)

ಸೌಗಂಧಿಕ. ಒಳ್ಳೇದು ಹಾ. (ಬಾಯಿಯಲ್ಲಿ ಹಾಕಿಕೊಂಡು ಅಗಿದು ನುಂಗಲು) ಪ್ರಿಯೆ ? ಬಹಳ ಸುಸ್ತಾಗುತ್ತಿರುವುದು. ಮೈಯೆಲ್ಲಾ ಬೆವರುತ್ತಿರುವುದೇತಕೆ ?

ವಸಂತಮಿತ್ರ. ಓಹೋ, ನೀಚಳು ಏನೋ ಕೃತ್ರಿಮಕೆಲಸವಾಡಿರುವಹಾಗಿದೆ. ಮಿತ್ರನೆ, ಮೋಸಹೋದೆಯಾ, ಸುಮ್ಮನಿರಲು ಮನಸ್ಸು ಬಾರದು.

ಆನಂದವತಿ. ಪ್ರಿಯನೆ, ಅಡಿಕೆ ಸೊಕ್ಕಿರಬಹುದು. ಈ ಹಾಲನ್ನು ಕುಡಿ.

ಸೌಗಂಧಿಕ. * ಪ್ರಿಯೆ, ತುಂಬ ಸುಸ್ತಾಗಿರುವುದು. ಸಹಿಸಲಾರೆ.

ಆನಂದವತಿ. ಈಗ ನನ್ನಪತಿಗೆ ಮೂರ್ಛೆಬಂದಿರುವುದು. ಇನ್ನು ಸಾವಕಾಶವಾಡಬಾರದು. (ತನ್ನ ಸೊಂಟದಿಂದ ಒಂದು ಭರ್ಜಿಯನ್ನು ತೆಗೆದುನೋಡಿ) ಇದೊ, ಈ ಕತ್ತಿಯಿಂದ ಇವನನ್ನು ಸಂಹರಿಸುವುದಕ್ಕೆ ಇದೇಸಮಯ.

ವಸಂತಮಿತ್ರ. ಇನ್ನು ನಾನು ಸುಮ್ಮನಿರಬಾರದು. (ಓಡಿಹೋಗಿ ಆನಂದವತಿಯ ಕೈಗಳನ್ನು ಹಿಡಿದುಕೊಳ್ಳುವುದರೊಳಗಾಗಿ)

ಆನಂದವತಿ. (ತಿರುಗಿನೋಡಿ ಯಾರೋ ಒಬ್ಬರು ಬರುವುದನ್ನು ನೋಡಿ) ಇನ್ನು ನನ್ನಗುಟ್ಟು ಹೊರಪಡುವುದು. (ಪತಿಯ ಕತ್ತನ್ನು ಕತ್ತರಿಸಿ)

---

* ರಾಗ—ಹಿಂದುಸ್ಥಾನಿ. ಗಜಲ್.

ಸೈಸೆನಾಂ ಸಂಕಟಂ । ಹಾ ಪ್ರಿಯೆ ॥ ಪ ॥ ಅಸುವೀಗ ಪೋಪುದು । ಸುಖವಂ ತೊರೆದಿಂತುಹಾ ॥ ಅ ॥ ಏಕೆ ವಿಧಿಯೀಪರಿ । ಶೋಕಕೆ ಈಡಾಗಿಸಿ । ನಾಶವಗೈವೆಯ ॥ ೧ ॥

ಅಯ್ಯೋ, ಯಾವನೋ ಒಬ್ಬ ಚೋರನು ಬಂದು ಪತಿಯನ್ನುಕೊಂದು ನನ್ನನ್ನು ಮಾನಹಾನಿಗೈಯುವುದಕ್ಕೆ ಬಂದಿರುವನಲ್ಲ. ಯಾರೂ ನನ್ನನ್ನು ಕಾಪಾಡುವರಿಲ್ಲವೆ. (ಗಟ್ಟಿಯಾಗಿ ಕೂಗಿಕೊಂಡಳು)

(ತಂದೆಯಾದ ರಾಜಹಂಸನೂ, ಮಂತ್ರಿಯಾದ ಸುನೀತಿಯೂ, ಕೆಲವರು ದೀವಟಿಗೆಗಳನ್ನು ಹಿಡಿದುಕೊಂಡು ಜಾಗ್ರತೆಯಾಗಿ ಒಳಕ್ಕೆ ಪ್ರವೇಶಿಸುವರು)

ರಾಜಹಂಸ. ತನಯಳೆ ಏನು, ಏನು, ಹೆದರಬೇಡ. ಇದೋ ಬಂದೆನು. ಗಾಬರಿಯಿಂದ ಕೂಗಿಕೊಂಡುದುದೇಕೆ?

ಆನಂದವತಿ. ಪಿತನೆ, ನಾನೇನೆಂದುಹೇಳಲಿ. ಇದೋ ಇಲ್ಲಿನೋಡು ಈ ನೀಚನು ಯಾರೋ ನಾನು ಅರಿಯೆ, ಹೇಗೋ ಒಳಗೆ ಪ್ರವೇಶಿಸಿ ನನ್ನ ಪ್ರಾಣಕಾಂತನನ್ನು ಕೊಂದು, ನನ್ನನ್ನು ಮಾನಭಂಗಪಡಿಸಲು ಯತ್ನಿಸಿರಲು ಗಾಬರಿಯಿಂದ ನಿಮ್ಮನ್ನು ಕೂಗಿಕೊಂಡೆನು. ಇದೋ ನೋಡು. ನನ್ನ ಪ್ರಾಣಕಾಂತನು ಸತ್ತುಬಿದ್ದಿರುವನು. ಅಯ್ಯೋ, ಪ್ರಾಣಕಾಂತನೆ. (ಕೆಳಗೆ ಬೀಳುವಳು.)

ರಾಜಹಂಸ (ವಸಂತಮಿತ್ರನನ್ನು ನೋಡಿ) ಎಲೊ, ನೀಚನೆ, ನಿನ್ನ ಪ್ರಾಣವನ್ನು ತೆಗೆಯಿಸುವೆನು. ಯಾರಲ್ಲಿ. (ಕೆಲವು ಸೇವಕರು ಬಂದು ನಿಲ್ಲುವರು) ಈ ನೀಚನನ್ನು ಹಿಂಗಟ್ಟುಕಟ್ಟಿ ದೂರದಲ್ಲಿ ನಿಲ್ಲಿಸಿಕೊಳ್ಳಿರಿ. ಅಯ್ಯೋ ವಿಧಿಯೆ, ಪೂರ್ಣವಾಗಿ ಮಂಗಳಮಹೋತ್ಸವವನ್ನು ನೋಡುವುದಕ್ಕಿಲ್ಲದಂತಾಯಿತೆ? ಅಯ್ಯೋ, ಸೌಗಂಧಿಕನೆ. ನಿರಪರಾಧಿಯಾದ ನಿನ್ನನ್ನು ಕೊಲ್ಲಲು ಈ ಮೃತ್ಯುವು ಎಲ್ಲಿ ಕಾದಿದ್ದನು. (ಎಲ್ಲರೂ ಆನಂದವತಿಯನ್ನು ಸ ತೈಸುವರು)

ಆನಂದವತಿ * (ಎಚ್ಚೆತ್ತು ಗಂಡನ ಶವವನ್ನು ನೋಡಿ) ಹಾ, ಪ್ರಾಣಕಾಂತನೆ,

---

* ರಾಗ—ಧನಾಸರಿ. ರೂಪಕ.

ಮಂದಭಾಗ್ಯಳಾದೆ । ಪ್ರಿಯಾ ॥ ಪ ॥ ಚಂದದಿಂದನಿನ್ನಪೊಂದಾ। ನಂದಪಡುವಭಾಗ್ಯವು ॥ ಇಂದುತೀರಿದುದೆಪ್ರಿಯ । ಸುಂದರ ಸುಖಕರ ॥೧॥ ಧರೆಗೆಭಾರವೆಂದುವಿಧಿ । ಹರಣಮಳಿದುಪೋದನೆ ॥ ಚರಣಸೇವೆಗೈಯದೆ । ಧರೆಯೊಳೆಂತು ಜೀವಿಪೆ ॥೨॥ ಇಂತುನಿರ್ಗೈಪೋದೆಯ । ಚಿಂತೆಗೀಡುಗೈದೆನು । ಕಂತುಸಮವರಕಾಯ । ಇಂತುಬಿಟ್ಟುಪೋದೆಯ ॥ ೩ ॥

ಕಂದ ॥ ಇಹಸುಖ ಮಿದುನೀರಸವೆಂ
ದಹಹಾ ಮುಕ್ತ್ಯಂಗನಾಪ್ರಿಯಂ ನೀನಾದೈ॥
ವಿಹಿತರ್ಗುಪಕೃತಿ ಗೆಯ್ಯುಜವ
ಮಹಿಮಾಮೃತಕಣಮ ನೀಂಟಸುತ್ತಂ ಪೋದೈ ॥೩೫॥

ಪ್ರಾಣವನ್ನಾದರೂ ಕಳೆದುಕೊಳ್ಳಲೆ ?

ವಸಂತಮಿತ್ರ. ಪ್ರಾಣವನ್ನು ತೆಗೆಯಿಸುವಳೇ ಹೊರತು, ತೆಗೆದು ಕೊಳ್ಳುವೆಯಾ ?

ರಾಜಹಂಸ. ಛೀ ನೀಚನೆ, ಬಾಯಿಮುಚ್ಚು ಕೊ.(ಶವವನ್ನುನೋಡಿ) ಅಯ್ಯೋ, ರೂಪವಂತನಾಗಿಯೂ, ಯೌವನಸ್ಥನಾಗಿಯೂ, ರಾಜಕುಮಾರನಾಗಿಯೂ ಇರುವ ನಿನಗೆ ಇಂತಹ ಮರಣವು ಪ್ರಾಪ್ತವಾಗ ಬಹುದೆ ?

ವಸಂತಮಿತ್ರ. ಇದಕ್ಕಾಗಿಯೇ ನಾನು ಚಿಂತಿಸುತ್ತಿರುವೆನು.

ಸುನೀತಿ. ಮಹಾರಾಜನೆ, ನಿಮ್ಮಂಥವರೇ ಹೀಗೆ ಚಿಂತಿಸುವಲ್ಲಿ ಯಾರುತಾನೆ ಸಂತೈಸುವರು. ಕಷ್ಟಕಾಲದಲ್ಲಿ ಧೈರ್ಯವನ್ನು ತಂದು ಕೊಳ್ಳುವುದೇ ಉತ್ತಮವು. ಸಮಾಧಾನಚಿತ್ತರಾಗಿ, ತಮ್ಮ ಕುಮಾರಿಯನ್ನು ಸಂತೈಸಿದಾದುದರೆ ಮುಂದಿನ ಕಾರ್ಯಗಳನ್ನು ಯೋಚಿಸ ಬೇಕಲ್ಲವೆ ?

ರಾಜಹಂಸ. ಕುಮಾರಿಯೆ, ಚಿಂತಿಸಬೇಡ. ನಿನ್ನ ಮೃತ್ಯುವು ಈ ನೀಚನ ರೂಪವಾಗಿ ಬಂದು ಹೀಗೆ ಮಾಡಿತು. ಮಾಡತಕ್ಕುದೇನು ? ಅಂತಃಪುರಕ್ಕೆ ತೆರಳು. ನಾನು ಈತನ ಉತ್ತರಕ್ರಿಯಾದಿಗಳನ್ನು ನಡೆಸುವೆನು. (ಮಗಳನ್ನು ಕಳುಹಿಸಿದಮೇಲೆ ಮಂತ್ರಿಯನ್ನು ನೋಡಿ) ಮಂತ್ರಿಯೆ, ಈ ನೀಚನು ಯಾರೆಂದು ವಿಚಾರಿಸು.

ಸುನೀತಿ. ಸೇವಕರಿರಾ, ಅವನನ್ನು ಇಲ್ಲಿಗೆ ಕರೆದುಕೊಂಡು ಬನ್ನಿರಿ.

ಸೇವಕರು. ಎಲೊ, ಪಾಪಿ, ಮುಂದೆನಡೆ. (ಎಂದು ತಳ್ಳಿಕೊಂಡು ಬರುವರು.

ವಸಂತಮಿತ್ರ. ನಿಜ. ನಾನು ಪಾಪಿಯಾದುದರಿಂದಲೇ ಅಮೋಘವಾದ ವಸ್ತುವನ್ನು ಕಳೆದುಕೊಂಡು ಬಾಯಿಬಾಯಿಬಿಡುತ್ತಾ, ನಿಮ್ಮ ಕೋಪಕ್ಕೆ ಆಹುತಿಯಾಗಬೇಕಾಗಿಬಂದಿದೆ.

ರಾಜಹಂಸ ನೀಚನೆ ? ನಿರಪರಾಧಿಯಾದ ನಮ್ಮ ಅಳಿಯನನ್ನು ಏಕೆ ಕೊಂದುಹಾಕಿದೆ. ಬೇಗಹೇಳು ?

ವಸಂತಮಿತ್ರ. ಮಂತ್ರಿವರ್ಯರೆ ? ನನ್ನನ್ನು ವಿಚಾರಿಸಿದರೆ ದುಃಖವು ಇನ್ನೂ ಹೆಚ್ಚುವುದು. ಆದುದರಿಂದ ವಿಚಾರಿಸತಕ್ಕದ್ದಲ್ಲ. ತಡೆಮಾಡದೆ ನನ್ನನ್ನು ಎಂದಿಗೆ ಮರಣದಂಡನೆಗೆ ಗುರಿಮಾಡಿದರೆ ಅಂದಿಗೆ ನನ್ನ ಪೂರ್ಣದುಃಖವು ನಿವರ್ತಿಯಾಗುವುದು.

ಸುನೀತಿ. ಮಹಾರಾಜನೆ ? ಈತನನ್ನು ನೋಡಿದರೆ ರಾಜಲಕ್ಷಣ ಸಂಪನ್ನನಾಗಿರುವಂತೆ ಕಾಣಿಸುವನಲ್ಲದೆ, ತಾನಾಗಿಯೇ ಪ್ರಾಣ ಬಿಡುವುದಕ್ಕೆ ಒಪ್ಪಿ, ಶಿಕ್ಷೆಯನ್ನು ವಿಧಿಸಬೇಕೆಂದು ವಿನಯದಿಂದ ಬೇಡಿಕೊಳ್ಳುವುದಕ್ಕೆ ಕಾರಣವೇನು ! (ವಸಂತಮಿತ್ರನಕಡೆಗೆ ತಿರುಗಿ) ಅಯ್ಯ ನೀನುಯಾರು ?

ವಸಂತಮಿತ್ರ. ನಾನೊಬ್ಬ ಚೋರನು, ಕೇಳಿ ಪ್ರಯೋಜನವಿಲ್ಲ. ಕಾಲಾವಕಾಶಮಾಡದೆ ತಮ್ಮ ಕರ್ತವ್ಯವನ್ನು ನಡೆಸಬಹುದಲ್ಲವೆ ?

ರಾಜಹಂಸ. ಇದು ಹಾಗಿರಲಿ. ಮೊದಲು ನೀನು ಇಲ್ಲಿಗೆ ಬಂದುದು ಹೇಗೆ ? ನಿಜವಾಗಿ ಹೇಳಿದರೆ ಕ್ಷಮಿಸಿಬಿಡುವೆವು.

ವಸಂತಮಿತ್ರ. ಪ್ರಭುವೆ, ಕಳ್ಳರೂ, ಕೊಲೆಪಾತಕರೂ, ಅಗೋಚರವಾಗಿ ಬರುವರೆಂದು ತಮಗೆ ತಿಳಿದ ಅಂಶಯವಿಲ್ಲ. ಇಂತಹ ಕಳ್ಳನಾಗಿಯೂ, ಕೊಲೆಪಾತಕನಾಗಿಯೂ ಇರುವ ನಾನು ಬಂದ ದಾರಿಯನ್ನು ಏಕೆ ಕೇಳುವಿರಿ ?

ರಾಜಹಂಸ. ಒಳ್ಳೇದು, ಈತನನ್ನು ಏಕೆಕೊಂದೆ ಬೇಗಹೇಳು ?

ವಸಂತಮಿತ್ರ. ಆಶೆಯಿಲ್ಲದೆ ಯಾರಾದರೂ ಹಣ್ಣನ್ನು ಮರದಿಂದ ಕಿತ್ತು ರುಚಿ ನೋಡುವರೆ !

ಸುನೀತಿ. ಮಹಾರಾಜನೆ, ಈತನ ಮಾತು ಉಡುಪು, ಮರಣ ದಂಡನೆಗೆ ಗುರಿಪಡಿಸಬೇಕೆಂದು ಬೇಡಿಕೊಳ್ಳುವುದು ಇವುಗಳನ್ನು ಪರ್ಯಾಲೋಚಿಸಿದುದಾದರೆ, ನನಗೆ ತುಂಬ ಸಂಶಯವಾಗುವುದು. ಇದನ್ನು ಚೆನ್ನಾಗಿ ಪರೀಕ್ಷಿಸತಕ್ಕುದಾಗಿದೆ. ಇದರಮೇಲೆ ತಮ್ಮಚಿತ್ತ.

ರಾಜಹಂಸ. ಅಯ್ಯ, ನಮ್ಮ ಅಳಿಯನನ್ನು ಕೊಲ್ಲುವುದಕ್ಕೆ ನಿನ್ನ ಕೈ ಹೇಗೆಬಂತು.

ವಸಂತಮಿತ್ರ. ಸ್ವಾಮಿ, ಮನಸ್ಸಿಗೆ ಒಡಂಬಡದ ಕಾರ್ಯವನ್ನು ಒಂದುವೇಳೆ ಕೈಗಳೂ ಮಾಡುವುದುಂಟಲ್ಲವೆ? ಆತನ ವಿಧಿಯೇ ನನಗೆ ಪ್ರೇರಕನು. ಆತನ ಮರಣಕ್ಕೆ ಕಾರಣವನ್ನು ಕೇಳಬೇಕೆಂದಿದ್ದುದಾದರೆ ನಾಳೆದಿವಸ ರಾತ್ರಿ ಹನ್ನೆರಡುಗಂಟೆಯಲ್ಲಿ ತಮ್ಮ ಮಂತ್ರಿಯೊಡನೆ ಬಂದುದಾದರೆ ಎಲ್ಲಾ ವಿಶದವಾಗಿ ತಿಳಿಯುವುದು. ಆದರೆ ಈ ಶವವನ್ನು ಅದುವರೆಗೂ ದಹನ ಮಾಡಕೂಡದೆಂದು ಬೇಡಿಕೊಳ್ಳುವೆನು.

ಸುನೀತಿ. ಮಹಾರಾಜನೆ? ಈತನಾಡಿದ ಮಾತುಗಳನ್ನು ಕೇಳಿದರಷ್ಟೆ. ಮೊದಲು ಈತನನ್ನು ಕಾರಾಗೃಹಕ್ಕೆ ಕಳುಹಿಸಿದಮೇಲೆ ಸ್ವಲ್ಪ ಮಾತನಾಡಬೇಕಾಗಿದೆ.

ರಾಜಹಂಸ. ಯಾರಲ್ಲಿ. (ಸೇವಕರು ಬರುವರು.) ಈ ಶವವನ್ನು ಜೋಪಾನವಾಗಿ ಒಂದು ಸ್ಥಳದಲ್ಲಿ ಇಟ್ಟರಿ. ಈತನನ್ನು ಕಾರಾಗೃಹಕ್ಕೆ ಸೇರಿಸಿ. (ವಸಂತಮಿತ್ರನನ್ನು ಕಾರಾಗೃಹಕ್ಕೆ ಕರೆದುಕೊಂಡು ಹೋಗುವರು.)

ಸುನೀತಿ. ತಮ್ಮ ಮಗಳೇ ಗಂಡನನ್ನು ಕೊಂದು ಆತನಮೇಲೆ ಯಾಕೆ ಹೇಳಿರಬಾರದು?

ರಾಜಹಂಸ. ಹೆಂಡತಿಯೇ ಗಂಡನನ್ನು ಕೊಲ್ಲುವುದುಂಟೆ?

ಸುನೀತಿ. ಈ ಕಲಿಯುಗದಲ್ಲಿ ನಡೆಯದ ಕಾರ್ಯಗಳಾವದಿರುವುದು. ಗಂಡನು ಸ್ಥುರದ್ರೂಪಿಯಾಗಿದ್ದರೂ ಹೆಂಡತಿಗೆ ಆತನಮೇಲೆ ಅನುರಾಗವಿಲ್ಲದಿದ್ದರೆ, ಅವನನ್ನು ತಿರಸ್ಕರಿಸಿ, ತನ್ನ ಪ್ರೀತಿಯನ್ನು ಪರಪುರುಷನಲ್ಲಿಡುವುರು. ಇದು ಅಂತರ್ಯದವಿಚಾರವು.

ರಾಜಹಂಸ. ಮಂತ್ರಿಯೆ, ಶೈಯಾಗಾರಕ್ಕೆ ಯಾವಪ್ರಾಣಿಯೂ ಪ್ರವೇಶಿಸುವುದಕ್ಕೆ ಮಾರ್ಗವೇಇಲ್ಲವಲ್ಲ.

ಸುನೀತಿ. ನಮಗೆ ಅಸಾಧ್ಯವಾದ ಕಾರ್ಯಗಳನ್ನು ಸ್ತ್ರೀಯರು ನಡೆಸುವರೆಂದು ನಾನು ಮೊದಲು ಹೇಳಿದನಲ್ಲವೆ! ಆದುದರಿಂದ ತಮ್ಮ ಮಗಳೆಂಬ ಭ್ರಾಂತಿಯನ್ನು ಬಿಡಬೇಕು. ನೀಚಹೆಂಗಸರನ್ನು ಎಂತಹ ನಿರ್ಬಂಧದಲ್ಲಿಟ್ಟದ್ದಾಗ್ಯೂ ಜಾತಿಧರ್ಮಕ್ಕೆ ಮೀರಿ ಮನಸ್ಸಿನಲ್ಲಾಗಲಿ, ಕಾರ್ಯದಲ್ಲಾಗಲಿ, ಮಾತಿನಲ್ಲಾಗಲಿ, ಕೆಟ್ಟ ಯೋಚನೆಗ

ಳನ್ನು ಮಾಡದೇ ಇರುವದಿಲ್ಲ. ಸೂರ್ಯಾಸ್ತಮಯವಾದ ಮೇಲೆ ಮರುದಿವಸ ಸೂರ್ಯೋದಯವಾಗುವದು ಹೇಗೆ ನಿಜವೊ, ಹಾಗೆಯೇ ಈ ಕಾಲದ ಸ್ತ್ರೀಯರಲ್ಲಿ ತ್ರಿಕರ್ಣಶುದ್ಧರಾಗಿರುವರೆನ್ನುವುದು, ಅತ್ತಿಗಿಡದಲ್ಲಿ ಹೂವು ಬಿಟ್ಟಂತಿರುವುದು. ಆದರೆ, ಕೇಳು,

ಕಂದ॥ ಧರೆಯೊಳ್ದೊರೆವಡೆದಿರ್ಪಾ ।
ವರಕುಲಸಂಜಾತೆಯೆಂಬನುಡಿಯಂಬಿಡುನೀಂ ॥
ಧರಣೀಶನೆ ವಿಷಮನಮೃತ ।
ಶರಧಿಯೊಳುದ್ಭವಿಸಿತೆಂದು ನೀನರಿಯದುದೇಂ ॥ ೩೬ ॥

ರಾಜಹಂಸ. ಮಂತ್ರಿಯೆ? ನಿನ್ನ ನ್ಯಾಯವನ್ನು ಕುರಿತು ಯೋಚಿಸಿದುದಾದರೆ ನನಗೆ ಭ್ರಾಂತಿಯಾಗುವುದು.

ಸುನೀತಿ. ಭ್ರಾಂತಿಯೊಂದೇ ಅಲ್ಲ, ಪ್ರಾಣಹಾನಿಯಾಗುವುದೂ ಉಂಟು. ವಿಷಯವಿಮರ್ಶೆಗೆ ತಾಳ್ಮೆಗುಣವೇ ಮುಖ್ಯವಾದುದರಿಂದ ಕೋಪವನ್ನುಬಿಟ್ಟು, ಇದರ ನಿಜಾಂಶವನ್ನು ಪರಿಶೀಲನೆ ಮಾಡೋಣಬನ್ನಿ. (ಹೋಗುವರು.)

ಕಂದ ॥ ಯದುರಾಜವಂಶತಿಲಕಂ ।
ಸದಮಲಹೃದಯಾಂಬುಧಾಬ್ಜಕುಲಖದ್ಯೋತಂ ॥
ಮದಭಂಜನನುರುಶಾಂತಂ ।
ಸದಾಶಿವನಪಾದಕಮಲಷಟ್ಪದನೆಸೆವಂ ॥ ೩೭ ॥

ದ್ವಿತೀಯಾಂಕಂ ಸಂಪೂರ್ಣಂ.

*

# ತೃತೀಯಾಂಕಂ.

———೧———

## ಸ್ಥಾನ ೧.—ಕಾರಾಗೃಹ.

(ವಸಂತಮಿತ್ರನು ಕಾರಾಗೃಹದಲ್ಲಿರುವನು.)

ವಸಂತಮಿತ್ರ. * ವಿಧಿಯೆ? ಪರಮಮಿತ್ರನನ್ನು ಕಳೆದುಕೊಳ್ಳುವಂತೆ ಮಾಡಿದುದಲ್ಲದೆ ಕಾರಾಗೃಹ ಪ್ರಾಪ್ತಿಮಾಡಿಸಿದೆಯಾ? ಮಿತ್ರನೆ, ನೀನು ಮೃತನಾದುದನ್ನು ನನ್ನಪಾಪಿಕಣ್ಣುಗಳು ನೋಡಬೇಕಾದವೆ! ವಿಧಿಯೆ, ನೀನು ಯಾರನ್ನುತಾನೆ ಬಿಟ್ಟಿರುವೆ. ನಿದ್ರೆಯಾದರೋ ಅತಿವೇಗವಾಗಿ ಬರುತ್ತಿರುವುದು. ಪ್ರಪಂಚದಲ್ಲಿರುವ ಸಕಲಜೀವಿಗಳಿಗುಂಟಾದ ಆಯಾಸವನ್ನು ಪರಿಹಾರಮಾಡುವದು ನಿದ್ರೆಯಾದಾಗ್ಯೂ, ಇದು ಈ ಕಾಲದಲ್ಲಿ ನನಗೆ ತೊಂದರೆಯನ್ನುಂಟುಮಾಡುವುದು. ಮಾಡತಕ್ಕದೇನು. (ಮಲಗಿಕೊಂಡು ನಿದ್ರೆಮಾಡುವನು.)

(ರಾಜಹಂಸ, ಸುನೀತಿ ಪ್ರವೇಶಿಸುವರು.)

ರಾಜಹಂಸ. ಮಂತ್ರಿಯೆ, ಕಾರಾಗೃಹವೆಲ್ಲಿ?

ಸುನೀತಿ. ಸ್ವಾಮಿ, ಇದೋ ಇಲ್ಲಿ ಕಾಣಿಸುವುದು.

ರಾಜಹಂಸ. ಕಾರಾಗೃಹದ ಬಾಗಲನ್ನುತೆಗೆ. ಆ ನೀಚನು ಏನು ಮಾಡುತ್ತಿರುವನೋ ನೋಡೋಣ. (ಹತ್ತಿರಕ್ಕೆ ಹೋಗಿ ನೋಡಲು ವಸಂತಮಿತ್ರನು ಗಾಢನಿದ್ರೆಯಲ್ಲಿರುವನು.)

---

* ರಾಗ—ಕದಂಬಗಜಲ್.

ವಿಧಿಯಿಂತುಗೈದನು । ವಿರೋಧಿಯಾದೆನು ॥ ಪ ॥ ಸರಸಸಖನನೀಗಿ । ಜೀವಿಸಿಹೆ ॥ ಅ ॥ ಎಂದುವಿನೋದವ । ನೊಂದುವೆಶ್ರೀಶನೆ । ಇಂದಿಂತುಪಾಪಿಯಾದೆನೊನಾ ॥ ೧ ॥

ಸುನೀತಿ. ಮಹಾರಾಜನೆ, ಈತನು ನಿದ್ರೆಮಾಡುತ್ತಿರುವನಲ್ಲವೆ, ಇದರಿಂದಲೇ ಇವನ ಯೋಗ್ಯತೆಯು ಚೆನ್ನಾಗಿ ತಿಳಿದುಬರುವುದು. ಹೇಗೆಂದರೆ, ಮುಖ್ಯವಾಗಿ ಕಾಮುಕರಿಗೂ, ಜೂಜುಗಾರರಿಗೂ, ಕಳ್ಳರಿಗೂ, ಮತ್ತು ಕೊಲೆಪಾತಕರಿಗೂ ಶುದ್ಧಾಂಗವಾಗಿ ನಿದ್ರೆಯು ಬರುವುದಿಲ್ಲ. ನಿರ್ದೋಷಿಗಳಾಗಿ, ನಿರಾಳಮನಸ್ಸುಳ್ಳವರಿಗೆ ಮಾತ್ರ ನಿದ್ರೆಯು ಬರುವುದು. ಇದರಿಂದ ಈತನು ತಪ್ಪಿತಸ್ಥನಲ್ಲವೆಂದು ಚೆನ್ನಾಗಿ ತೋರಿಬರುವುದು. ಹಾಗೆ ನಿಜವಾಗಿಯೂ ತಮ್ಮ ಅಳಿಯನನ್ನು ತಾನೇ ಕೊಂದೆನೆಂದು ಒಪ್ಪಿಕೊಂಡಮೇಲೆ, ಶಿಕ್ಷೆಗೆ ಗುರಿಪಡಿಸುವೆವೆಂದು ಹೇಳಿದುದನ್ನು ಕೇಳಿದಮೇಲೆಯೂ ನಿದ್ರೆಯು ಬರುವದುಂಟೆ? ಈತನಲ್ಲಿ ಏನೋ ವಿಶೇಷವಿರುವಂತಿದೆ. ಚೆನ್ನಾಗಿ ಯೋಚಿಸತಕ್ಕುದಾಗಿರುವುದು. ಇದರಮೇಲೆ ತಮ್ಮಚಿತ್ತ.

ರಾಜಹಂಸ. ಮಂತ್ರಿಯೆ, ನಿನ್ನ ಯೋಚನೆಯು ಸ್ತೋತ್ರಾರ್ಹವಾದುದೇಸರಿ. ಒಳ್ಳೇದು ಈತನನ್ನು ಎಬ್ಬಿಸು, ಕೇಳಿನೋಡೋಣ.

ಸುನೀತಿ. ಅಯ್ಯಾ, ಪರದೇಶಿಯೆ, ಏಳು, ಏಳು, ಮಹಾರಾಜರು ಬಂದಿದಾರೆ.

ವಸಂತಮಿತ್ರ. (ಕಣ್ಣುಗಳನ್ನು ತಿಕ್ಕುತ್ತಾ) ಮಹಾರಾಜರಿಗೆ, ವಂದಿಸುವೆನು. ಸ್ವಾಮಿ ಈಗ ಎಷ್ಟುಹೊತ್ತಾಗಿರುವುದು?

ರಾಜಹಂಸ. ಅರ್ಧರಾತ್ರಿಯಾಗಿರುವುದಲ್ಲವೆ! ಎಲ್ಲಾ ಕಡೆಯುಲ್ಲಿಯೂ ನಿಶ್ಶಬ್ದವಾಗಿರುವುದು.

ವಸಂತಮಿತ್ರ. ಸ್ವಾಮಿ, ಹೆದರದೆ ನನ್ನ ಜತೆಯಲ್ಲಿಯೇ ಬರಬೇಕು. ನಾನು ತಮ್ಮನ್ನು ನಿಲ್ಲಿಸಿದ ಸ್ಥಳದಲ್ಲಿ ಕ್ರೋಧವಾದ ಮಾತುಗಳು ಕಿವಿಗಳಿಗೆ ಬಿದ್ದಾಗ್ಯೂ ಕೋಪಿಸಿಕೊಳ್ಳದೆ, ದಂಡಿಸುವುದಕ್ಕೆ ಹೋಗದೆ, ಕ್ರೋಧವೆಂಬ ಮದ್ದಾನೆಗೆ ವಿವೇಕವೆಂಬ ಅಂಕುಶದಿಂದ ಶಿಕ್ಷಿಸುತ್ತಿರಬೇಕು. ಹಾಗಿಲ್ಲದಿದ್ದರೆ, ಮುಂದಿನ ಕಾರ್ಯಗಳನ್ನು ನಡೆಸುವುದಕ್ಕೂ, ವಿಷಯವಿಮರ್ಶೆಗೂ, ಅವಕಾಶವಾಗಲಾರದೆಂದು ಬೇಡಿಕೊಳ್ಳುವೆನು.

ಸುನೀತಿ. ಈತನು ಹೇಳುವುದು ಸಮ್ಮತವಾದುದಾಗಿದೆ.

ರಾಜಹಂಸ. ಅಯ್ಯೋ ಬಾ, ಮುಂದೆನಡೆ. (ಆತನ ಕೈಗಳನ್ನು ಹಿಡಿದುಕೊಳ್ಳುವುದಕ್ಕೆ ಹೋಗುವನು.)

ವಸಂತಮಿತ್ರ. ಅಪರಾಧಿಯಾದ ನನ್ನನ್ನು ಮುಟ್ಟುವದು ಯೋಗ್ಯವಲ್ಲ.

ರಾಜಹಂಸ. ಸಚಿವನೆ, ಈತನು ರಾಜಸಂಬಂಧಿಯೋ ಅಥವ ಸತ್ಪುರುಷರ ಮಗನೋ ಆಗಿರಬೇಕು. ಹಾಗಿಲ್ಲದಿದ್ದರೆ, ಇಂತಹ ನೀತಿಮಾತುಗಳು ಹೇಳುವುದಕ್ಕೆ ಕಾರಣವೆಲ್ಲಿರುತ್ತಿತ್ತು. ಮಂತ್ರಿಯೆ, ನಾವು ಹೊರಡೋಣ. ಅಯ್ಯಾ, ಪರದೇಶಿಯೆ, ಮುಂದೆ ನಡೆ.

(ಎಲ್ಲರೂ ಹೋಗುವರು.)

---

## ಸ್ಥಾನ ೨.—ಕುಟೀರ, ಸುರಂಗಮಾರ್ಗ.

(ಕುಂಟನು ಕೂತಿರುವನು.)

ಕುಂಟ. ಆನಂದವತಿಯು ಇನ್ನೂ ಏತಕ್ಕೆ ಬರಲಿಲ್ಲ. ನನಗಾದರೋ ಬಹಳ ಹಸಿವಾಗುತ್ತಿರುವುದಲ್ಲ!

(ರಾಜಹಂಸನೂ, ಸುನೀತಿಯೂ, ವಸಂತಮಿತ್ರನ ಪ್ರೇರಣೆಯಿಂದ ಗೋಪ್ಯವಾಗಿ ಸುರಂಗ ಮಾರ್ಗವಾಗಿ ಹೊರಟು ಕುಟೀರಕ್ಕೆ ಬಂದು ಎಲ್ಲರನ್ನೂ ತನ್ನ ಹತ್ತಿರ ಮರೆಯಾಗಿ ನಿಲ್ಲಿಸಿಕೊಳ್ಳುವನು)

ತಾನು ಮದುವೆಮಾಡಿಕೊಂಡೆನೆಂಬ ಅಹಂಕಾರದಿಂದ ಆನಂದವತಿಯು, ನನ್ನನ್ನು ತಿರಸ್ಕರಿಸಿದಳೊ, ಅಥವ ನನಗೋಸ್ಕರ ಭೋಜನಪದಾರ್ಥಗಳನ್ನು ತೆಗೆದುಕೊಂಡು ಬರುತ್ತಿರುವುದರಿಂದ ಹೊತ್ತಾಗಿರುವುದೊ?

ರಾಜಹಂಸ. (ವಸಂತಮಿತ್ರನನ್ನು ನೋಡಿ) ಅಯ್ಯೋ, ಇದೇನು ವಿಚಿತ್ರ! ಈತನು ಕುರೂಪಿಯಾಗಿಯೂ, ಕುಂಟನಾಗಿಯೂ ಇರುವ ತನ್ನಸ್ಥಿತಿಯನ್ನರಿಯದೆ ನಾಚಿಕೆಯಿಲ್ಲದೆ ಹೆಂಗಸಿನವಿಷಯವಾಗಿಯೇ ಕುರಿತು ಮಾತನಾಡುತ್ತಿರುವನು!

ವಸಂತಮಿತ್ರ. ಇದೋ, ಪರಾಂಬರಿಸಬೇಕು. ಆತುರಪಡಲಾಗದು. (ತೋರಿಸುತ್ತಾ) ತಟ್ಟೆಯಲ್ಲಿ ಫಲಹಾರಸಾಮಗ್ರಿಗಳನ್ನು ಈ

ಕುಂಟನಿಗೆ ಕೊಡುವುದಕ್ಕಾಗಿ, ವೈಯಾರದಿಂದ ಮಂದಹಾಸಯು ಕ್ತಳಾಗಿ ಬರುವವಳನ್ನು ನೋಡಿ ಸಂತೋಷಪಡು. (ತೋರಿಸುವನು.)

ರಾಜಹಂಸ. (ಅತ್ತಿತ್ತನೋಡಿ) ಇದೇನು! ಅರ್ಧರಾತ್ರಿಯಲ್ಲಿ ಓರ್ವಳೆ ಬರುವವಳ್ಯಾರು?

ಸುನೀತಿ. ಶತ್ರುಗಳನ್ನೆಲ್ಲಾ ತೃಣೀಕರಿಸುವಂತಹ ಧೈರ್ಯವಂತನ ಮಗಳಾಗಿರುವುದರಿಂದಲೇ, ಹೀಗೆ ಬರುವುದಕ್ಕೆ ಧೈರ್ಯವುಂಟಾಗಿರು ವುದೆಂದೇ ಹೇಳಬೇಕಾಗಿದೆ.

ಆನಂದವತಿಯ ಪ್ರವೇಶ.

ಆನಂದವತಿ. (ಕುಂಟನಹತ್ತಿರಕ್ಕೆ ಬಂದು) ನಿನ್ನ ಸಂತೋಷಕ್ಕೆ ಪ್ರತಿ ಬಂಧಕನನ್ನು . . . ಈಗಹೇಳಿ ಪ್ರಯೋಜನವಿಲ್ಲ. ಇದೋ, ಈ ಫಲಹಾರದ ಸಾಮಾನುಗಳನ್ನು ಸ್ವೀಕರಿಸಿದಮೇಲೆ ಮಿಕ್ಕ ವಿಷಯ ಗಳನ್ನು ವಿಸ್ತಾರವಾಗಿ ಹೇಳುವೆನು.

ವಸಂತಮಿತ್ರ. (ರಾಜನನ್ನು ನೋಡಿ) ಮಹಾರಾಜನೆ? ಈ ದಂಪತಿ ಗಳನ್ನು ನೋಡಿ ಸಂತೋಷಪಡು; ಸದ್ದುಮಾಡಬೇಡ.

ಕುಂಟ. ನೀನು ಆ ರಾಜಹಂಸನ ಮಗಳೇಸರಿ. ಒಳ್ಳೇದು ನನ್ನಹತ್ತಿರಕ್ಕೆ ಬಾ.

ವಸಂತಮಿತ್ರ. ರಾಜನೆ, ಈಕೆಯು ತಮ್ಮ ಮಗಳಲ್ಲದೆ ಮತ್ತಾ ರೂ ಅಲ್ಲ.

ರಾಜಹಂಸ. (ಸ್ವಗತ) ಅಯ್ಯೋ, ಮಂದಭಾಗ್ಯನಾದ ರಾಜನೆ, ಇದನ್ನು ನೋಡಿ ಜೀವಿಸಿರಬೇಕೆ! ನೀಚಳೆ, ನನ್ನ ಹೆಸರನ್ನು ವೃಥಾ ಹೇಳುವುದೇಕೆ? ನಾಚಿಕೆಯಿಲ್ಲದೆ ನರಹತ್ಯಕ್ಕೆ ಹೇಸದಿರುವ ಪಾತಕಿಯೇ ನನ್ನಲ್ಲಿ ಜನಿಸಿದುದಕೆ ಸಫಲವಾಯಿತು. ಮಂತ್ರಿಯೆ, ಈ ನೀಚರನ್ನು ಈಗಲೇ ಕೊಂದುಹಾಕುವೆನು. (ಸ್ವಲ್ಪ ಮುಂದಕ್ಕೆ ಹೋಗುವನು.)

ಸುನೀತಿ. ಮಹಾರಾಜನೆ, ನಿಧಾನಿಸಬೇಕು. ತಮ್ಮ ಮಗಳಾದ ಮಾತ್ರಕ್ಕೆ ಏನು? ಏತಕ್ಕೆ ಬಂದಿರುವಳೊ, ನಡೆಯುವುದನ್ನೆಲ್ಲಾ ಚೆನ್ನಾಗಿ ಪರೀಕ್ಷೆಮಾಡಿದನಂತರ, ತಮ್ಮ ಮನಸ್ಸಿಗೆ ಬಂದಂತೆ ನಡೆಸಬಹುದು. ಸ್ವಲ್ಪ ನಿಧಾನಿಸಿ. (ತಡೆಯುವೆನು)

ಕುಂಟ. ಪ್ರಿಯೆ, ನೀನು ನಿನ್ನೆದಿವಸ ಹೇಳಿದ ಆ ನಿನ್ನ ಪತಿಯನ್ನು ಏನುಮಾಡಿಬಂದೆ ?

ವಸಂತಮಿತ್ರ. ಇದೋ, ಕೇಳತಕ್ಕ ವಿಷಯವನ್ನು ಚೆನ್ನಾಗಿ ಲಾಲಿಸಬೇಕು.

ಆನಂದವತಿ. ಮಾಡುವುದೇನು, ನಿನ್ನಸಂಗಡ ಹೇಳಿದಂತೆ ಅವನನ್ನು ಯಮನಪುರಿಗೆ ಕಳುಹಿಸಿ ಬಂದಿರುವೆನು.

ವಸಂತಮಿತ್ರ. ಮಹಾರಾಜನೇ ಚೆನ್ನಾಗಿ ಕೇಳಿದಿರಷ್ಟೆ ?

ರಾಜಹಂಸ. ಅಯ್ಯೋ, ಪರಮ ಚಂಡಾಲಳೆ ನಿನ್ನ ನಿಷ್ಕರುಣವೆಷ್ಟೆಂದು ಹೇಳಲಿ. ನವಮನ್ಮಥನಂತಿದ್ದ ನಿನ್ನ ಪತಿಯನ್ನು ಕೊಂದೆನೆಂದು ಹೇಳುವ ನಿನ್ನ ನಾಲಿಗೆಯು ಏಕೆ ಹಾಳಾಗಲಿಲ್ಲ ? (ವಸಂತಮಿತ್ರನನ್ನು ನೋಡಿ.) ಅಯ್ಯಾ. ಇನ್ನು ನಾನು ಸಹಿಸಲಾರೆನು. ಈಗಲೇ ಕೊಲ್ಲುವುದು ನಿಜ.

ವಸಂತಮಿತ್ರ. ಮಹಾರಾಜನೆ, . ಪೂರ್ತಿಯಾಗಿ ಕೇಳಲೂ ಇಲ್ಲ. ನೋಡಲೂ ಇಲ್ಲ. ಸ್ವಲ್ಪ ತಾಮಸ ಮಾಡಬೇಕು.

ಕುಂಟ. ಪ್ರಿಯೆ, ಗಂಡನನ್ನು ಕೊಂದರೀತಿ ಹೇಗೆ ?

ವಸಂತಮಿತ್ರ. ರಾಜನೆ, ಕೊಂದವಿಷಯವೆಲ್ಲಾ ಈಗ ವಿಶದವಾಗಿ ತಿಳಿಯುವುದು ಲಾಲಿಸಬೇಕು.

ಆನಂದವತಿ. ಮೋಹನಾಂಗನೆ, ಇಲ್ಲಿ ನಿನ್ನಸಂಗಡ ಹೇಳಿಹೋದ ನಂತರ ಶೈಯ್ಯಾಗಾರವನ್ನು ಸೇರಿ, ಅಲ್ಲಿ ಸಕಲವಿಧವಾದ ಪದಾರ್ಥಗಳಲ್ಲಿಯೂ ವಿಷಚೂರ್ಣವನ್ನು ಬೆರಸಿಕೊಡಲು ನನ್ನ ಪ್ರಿಯನು ಯಾವದನ್ನೂ ತೆಗೆದು ಕೊಳ್ಳಲಿಲ್ಲ.

ವಸಂತಮಿತ್ರ ಧರಣೀಶನೆ, ನಾನು ಇಲ್ಲಿಯೇಇದ್ದಾಗ್ಗೆ, ಈಕೆಯು ಹೇಳಿದವಿಷಯಗಳೆಲ್ಲಾ ಅಲ್ಲಿ ನಿಜವಾಗಿಯೂ ನಡೆದ ಕೃತ್ಯಗಳೇಸರಿ.

ರಾಜಹಂಸ. ಪಾತಕಿಯೆ, ನಿರಪರಾಧಿಯಾದ ಆ ಸುಂದರಾಂಗನನ್ನು ಕೊಂದಸಂಗತಿಯನ್ನೇನೆಂದು ಬೊಗುಳುವೆ. ನಿನಗೆ ಇನ್ನೂ ಸಾವು ಏಕೆಬರಲಿಲ್ಲ ?

ಕುಂಟ. ಅನಂತರ ಏನು ಮಾಡಿದೆ ?

ಸುನೀತಿ. ನೀಚನೆ ಈ ವಿಷಯವನ್ನು ಎಷ್ಟು ಪ್ರೀತಿಯಿಂದ ಲಾಲಿಸುತ್ತಿರುವೆ ?

ವಸಂತಮಿತ್ರ. ಭೂಪಾಲನೆ, ಈ ಕುಂಟನು ಅನೇಕ ಬುದ್ಧಿವಾದಗಳನ್ನು ತಮ್ಮ ಮಗಳಿಗೆ ಹೇಳಿದನು. ಕೊನೆಗೆ ಇವಳ ಹೆದರಿಕೆಗೆ ಅಧೀನನಾಗಬೇಕಾಯಿತು.

ಆನಂದವತಿ. ಅನಂತರ ಸ್ವಲ್ಪ ತಾಂಬೂಲವನ್ನಾದರೂ ಸ್ವೀಕರಿಸಬೇಕೆಂದು ಅನೇಕ ವಿಧವಾಗಿ ಒಡಂಬಡಿಸಿ ಕೊಡಲು ಕೊನೆಗೆ ಪ್ರಿಯನು ಒಪ್ಪಿ ಸವಿದನು.

ವಸಂತಮಿತ್ರ. ರಾಜನೆ, ಇದರಿಂದಲೇ ಸೌಗಂಧಿಕನು ಮೊದಲು ಸ್ಮೃತಿ ತಪ್ಪಿದುದು.

ಆನಂದವತಿ. ಅನಂತರ ಹತ್ತಿರವಿದ್ದ ಒಂದು ಬಾಕನ್ನು ತೆಗೆದು, ತಿವಿದು ಕೊಂದು ಹಾಕಿದೆನು. ಇಷ್ಟೇ ಅಲ್ಲ. ನಾನು ಗೋಪ್ಯದಲ್ಲಿ ನಡೆಸುತ್ತಿದ್ದ ಕೃತ್ಯವನ್ನು ನೋಡುತ್ತಿದ್ದವನೊಬ್ಬನು ಬಂದು ಬಿಡಿಸಿಕೊಳ್ಳುವುದಕ್ಕೆ ಬರುವಂತೆ ತೋರಿದುದನ್ನು ನೋಡಿ, ಇನ್ನು ನನ್ನ ಕೃತ್ಯವು ಹೊರಪಟ್ಟೀತೆಂದು ಯೋಚಿಸಿ ಕೂಡಲೆ ಯಾರೋ ಒಬ್ಬ ಕಳ್ಳನು ನನ್ನ ಕಾಂತನನ್ನು ಕೊಂದು ನನ್ನನ್ನೂ ಮಾನಹಾನಿಗೈಯುವುದಕ್ಕೆ ಬಂದಿರುವನಲ್ಲ ಯಾರೂ ನನ್ನನ್ನು ಕಾಪಾಡುವರಿಲ್ಲವೆ, ಎಂದು ಗಟ್ಟಿಯಾಗಿ ಕೂಗಿಕೊಂಡು ನನ್ನ ತಪ್ಪನ್ನು ಅವನಮೇಲೆ ಹೊರಿಸಿ ಬಂದಿರುವೆನು. ಇದೇ ನನ್ನ ಸಹಾಸ.

ಸುನೀತಿ. ಕಂದ ॥ ಪತಿಯಂಕೊಲ್ವನಿತಂಜಿಸಿ
ಮತಿವಂತೆಯು ಪೇಳ್ವವಳ್ಗೆ ಗೈದುಪಕೃತಿತಾಂ ॥
ಮತಿಗೆಟ್ಟು ಪಾಪಿಗಮೃತವ
ನತಿಮೋಹದಿ ನೆರೆದ ಮಾಳ್ಕೆಯಾದತ್ತೀಗಳ್ ॥೩೮॥

ವಸಂತಮಿತ್ರ. ಸ್ವಾಮಿ, ತಾವು ಈಕೆಯಾಡಿದುದೆಲ್ಲಾ ಚೆನ್ನಾಗಿ ಕೇಳಿದರಷ್ಟೆ. ನಾನು ತಮ್ಮ ಅಳಿಯನನ್ನು ಕೊಂದೆನೆಂದು ಭಾವಿಸುವ ಪಕ್ಷಕ್ಕೆ ತಮ್ಮ ಶಿಕ್ಷೆಗೆ ಶಿದ್ಧನಾಗಿರುವೆನು.

ಸುನೀತಿ. ಸ್ತ್ರೀಯರೆ, ನೀವು ಇಂತಹ ನೀಚಳ ಮಾರ್ಗವನ್ನನುಸರಿಸದಿದ್ದಾದರೆ ನಿಮಗೇ ಕ್ಷೇಮವಾದೀತು.

ರಾಜಹಂಸ. ಈ ನೀಚಳು ಎಂತಹ ಮೋಸಗಾರಳು. ನಿರಪರಾಧಿಯಾದ ನಿನ್ನನ್ನು ಕೊಲ್ಲಿಸುವುದಕ್ಕೆ ಪ್ರಯತ್ನ ಪಟ್ಟಳಲ್ಲ! (ಸ್ವಗತ) ಇಷ್ಟು ಅನಾಹುತಕ್ಕೆ ಕಾರಣನಾದವನೇ ನಾನು. ಹೇಗೆಂದರೆ:—ಸ್ತ್ರೀಯರಿಗೆ ಸರಿಯಾದ ಕಾಲದಲ್ಲಿ ಲಗ್ನವಾಗದೆ ಚಾತುರ್ಯವನ್ನುಂಟುಮಾಡುವ ನಾನಾವಿಧ ನಾಟಕಾದ್ಯಲಂಕಾರ ಗ್ರಂಥಗಳನ್ನು ಓದಿಸಿದುದರಿಂದಲ್ಲವೇ ಹೀಗಾಯಿತು. ಆದುದರಿಂದ ತಿಳಿದವರು ಸಕಾಲದಲ್ಲಿ ಹೆಂಗಸಿಗೆ ಮದುವೆ ಮಾಡಬೇಕಲ್ಲದೆ, ವಿಶೇಷ ಚತುರತೆಯನ್ನುಂಟುಮಾಡುವ ವಿದ್ಯೆಗಳನ್ನು ಎಂದಿಗೂ ಕಲಿಸಬಾರದೆಂದು ಪೂರ್ವಿಕರು ಹೇಳುತ್ತಿದ್ದ ಮಾತುಗಳು ಈಗ ನನಗೆ ಚೆನ್ನಾಗಿ ಅನುಭವಕ್ಕೆ ಬಂದಿತು. (ಕೋಪದಿಂದ ಹೊರಗೆ ಬಂದು ಮಗಳನ್ನು ನೋಡಿ) ಎಲೆ ನೀಚಳೆ, ನೀನು ಇದುವರೆಗೂ ಆಡಿದ ಮಾತುಗಳೆಲ್ಲಾ ಮರೆಯಲ್ಲಿಯೇ ನಿಂತು ಕೇಳಿ ಸಹಿಸಲಾರದೆ ನಿನ್ನನ್ನು ಕೊಲ್ಲುವುದಕ್ಕೆ ಬಂದಿರುವೆನು.

ಅನಂದವತಿ. ಜನಕನೆ, ಈಗ ನಾನು ಆಡಿದ ಮಾತುಗಳೆಲ್ಲಾ ಸ್ವಪ್ನದಲ್ಲಿ ಹೀಗೆ ಮಾತನಾಡಿದೆನೆಂದು ಹೇಳುವುದನ್ನು ಮಾತ್ರ ಮರೆತಿದ್ದೆನು. ನನ್ನಪತಿಯು ಪ್ರಾಣಬಿಟ್ಟದ್ದರಿಂದ ಹೇಗಾದರೂ ಬದುಕಿಸಿಕೊಡಬೇಕೆಂದು ಈ ಮಹರ್ಷಿಯನ್ನು ಬೇಡಿಕೊಳ್ಳುವುದಕ್ಕೆ ಬಂದಿರುವೆನೇ ಹೊರ್ತು ಮತ್ತೇನೇನೂ ಇಲ್ಲ.

ರಾಜಹಂಸ. ಎಲೆ ಅವಿಧೇಯಳೆ, ಕಣ್ಣಾರ ನೋಡಿದುದನ್ನೇ ಮರೆಮಾಡುವಳಲ್ಲ. ಅಯ್ಯೋ, ಈ ಸ್ತ್ರೀಜನ್ಮವು ಯಾವದಕ್ಕೂ ಹೇಸತಕ್ಕದ್ದಾಗಿಲ್ಲ. ಒಳ್ಳೇದು ನಿನ್ನ ಜೀವಿತವನ್ನೇ ಸ್ವಪ್ನಪ್ರಾಯದಂತೆ ಮಾಡಿಸುವೆನು. (ಕುಂಟನನ್ನು ನೋಡಿ)ನೀಚನೆ, ನೀನುಯಾರು ?

ಅನದಂವತಿ. ರಾಜನೇ ಕೇಳು.

ಕಂದ ॥ ಧರೆಯೊಳಗೆ ಕಡುದಾರಿದ್ರ್ಯಂ
ಪಿರಿಯರ ನಿಂದನೆ ಯುವತಿ ಪರಾಧೀನತೆಯುಂ ॥
ನೆರೆಹೇಯುಮೆನಿಸಿತೋ ಸ್ತ್ರೀ
ಯರೊಳಿವುಜನ್ಮಾಂತರಾರ್ಜಿತದನ್ಯೆಜಫಲಂ ॥೩೯॥

ಕುಂಟ. (ಕಾವಿಬಟ್ಟೆಯನ್ನು ಧರಿಸಿ, ಭಸ್ಮವನ್ನು ಹಣೆಗೆತೊಡೆದು, ಕೈಯಲ್ಲಿ ರುದ್ರಾಕ್ಷಿಸರವನ್ನು ಹಿಡಿದು, ಕಣ್ಣುಗಳನ್ನು ಮುಚ್ಚಿಕೊಂಡು ಧ್ಯಾನ

ಮಾಡುವವನಂತೆ ಕೂತಿರುವನು. ತಮ್ಮ ಕುಮಾರಿಯು ಹೇಳಿದುದನ್ನು ಕೇಳಿದಮೇಲೆ ನನ್ನನ್ನು ಪ್ರಶ್ನೆಮಾಡುವುದು ಅನಾವಶ್ಯಕವಲ್ಲವೆ? ನಮ್ಮಂತವರು ಇಂತಹವರನ್ನು ಆಶ್ರಯಿಸಿ ಹೊಟ್ಟೆಹೊರದುಕೊಳ್ಳುವುದೆಂದರೇನು? ಮುಖ್ಯವಾಗಿ ನಮ್ಮ ಪದಾರ್ಥವು ಒಳ್ಳೇದಾಗಿಲ್ಲದಿದ್ದರೆ ಇತರರನ್ನು ದೂಷಿಸುವುದು ಯಾವನ್ಯಾಯ? ಬುದ್ಧಿವಂತರಾದ ತಾವು ತುಂಬಾ ಯೋಚಿಸತಕ್ಕುದಾಗಿದೆ.

ರಾಜಹಂಸ ಮುಖ್ಯವಾಗಿ ನನ್ನ ತಪ್ಪೇ ವಿಶೇಷವಾಗಿರುವಲ್ಲಿ, ಮತ್ತೊಬ್ಬರನ್ನು ದೂಷಿಸುವುದು ತಪ್ಪು. ಮಾಡತಕ್ಕುದೇನು. (ಕೋಪದಿಂದ ಮರೆಯಲ್ಲಿ ನಿಂತಿರುವ ಮಂತ್ರಿಯೊಡನೆ) ಮಂತ್ರಿಯೇ, ಈ ನೀಚರನ್ನು ಇಲ್ಲಿಯೇ ಶಿರಚ್ಛೇದನ ಮಾಡಿಸು. ಇವಳ ಮುಖವನ್ನು ನೋಡಲಾರೆ. (ಹೋಗುವನು.)

ಸುನೀತಿ. ಯಾರಲ್ಲಿ. (ಕೆಲವು ಕಟುಕರು ಬರುವರು) ಕಟುಕರಾ, ನೀವು ಈ ಉಭಯತ್ರರನ್ನು ಕತ್ತರಿಸಿ ಬಂದು ವರ್ತಮಾನವನ್ನು ಹೇಳಬೇಕೆಂದು ಮಹಾರಾಜನ ಅಪ್ಪಣೆಯಾಗಿದೆ. ಜಾಗ್ರತೆಪಡಿಸಿ. (ವಸಂತಮಿತ್ರನನ್ನು ನೋಡಿ) ಅಯ್ಯಾ, ನಿನ್ನ ಇಷ್ಟವನ್ನು ಕೇಳಿ ನಿನ್ನನ್ನು ಕರೆದುಕೊಂಡು ಬರಬೇಕೆಂದು ನಮ್ಮ ಮಹಾರಾಜನು ಹೇಳಿರುವನು. ಬಾ, (ಹೋಗುವನು.)

ವಸಂತಮಿತ್ರ. ನೀಚರು ಅಕಾರಣವಾಗಿ ನಿರ್ದೋಷಿಗಳನ್ನು ನಾಶಮಾಡಲು ಉದ್ಯುಕ್ತಪಟ್ಟರೆ ದೇವರೂ ಅವರ ವಿಷಯದಲ್ಲಿ ನಿರ್ದಯನಾಗಿರುವನು. ದೋಷಿಗಳಿಗೆ ಇದೇ ಪ್ರಾಯಶ್ಚಿತ್ತವು. ಇನ್ನು ನಾನು ನನ್ನ ಮಿತ್ರನ ಶವವನ್ನು ತೆಗೆದುಕೊಂಡು ಹೋಗಿ ಗಂಗಾತೀರದಲ್ಲಿ ಆತನ ಸಂಸ್ಕಾರವನ್ನು ಮಾಡಿ ಕೃತಕೃತ್ಯನಾಗುವೆನು. (ಹೋಗುವನು)

(ಇಬ್ಬರು ಕಟುಕರು ಪ್ರವೇಶಿಸುವರು)

೧ನೇಯವನು. ಇಲ್ಲಿರುವವರನ್ನು ಶಿರಚ್ಛೇದನ ಮಾಡಬೇಕೆಂದು ನಮ್ಮ ಅರಸನ ಆಜ್ಞೆಯಾಗಿರುವುದರಿಂದ ಬಂದಿರುವೆವು. (ಅತ್ತಿತ್ತ ನೋಡಿ) ಇದೇನು! ಇಲ್ಲಿ ನಮ್ಮ ರಾಜನ ಮಗಳಿರುವಂತಿದೆ! ಆಶ್ಚರ್ಯ! ನಮ್ಮ ಮಹೀಪಾಲನು ನೀತಿಪರನಾಗಿರುವುದರಿಂದ ಶಿಕ್ಷೆ

ಯನ್ನು ವಿಧಿಸಿರುವನು. ಸಂಶಯವೇಕೆ! (ಇಬ್ಬರೂ ಕತ್ತಿಯನ್ನು ಮಸೆಯುತ್ತಾ ನಿಂತಿರುವರು.)

ಆನಂದವತಿ. ಪ್ರಾಣಕಾಂತನೆ, ನಮ್ಮ ತಂದೆಯು ಹೊರಟು ಹೋದನು. ಇನ್ನು ನಾವು ಸುಖವಾಗಿರೋಣವೆ? ಮುಂದಕ್ಕೆ ಯಾವ ತೊಂದರೆಯೂ ಇಲ್ಲ.

೨ನೇಯುವನು. ನಿಜ. ನಿಮಗೆ ಯಾವ ತೊಂದರೆಯೂ ಮುಂದಕ್ಕೆ ಇರದಂತೆ ಮಾಡುವುದಕ್ಕೇ ನಾವು ಬಂದಿರುವೆವು. ಯೋಚನೆಯೇಕೆ?

ಕುಂಟ ನೀಚಳೆ, ನಿನ್ನ ಪತಿಯನ್ನು ಕೊಲ್ಲುವುದಕ್ಕೆ ನಿನ್ನ ಮನಸ್ಸು ಹೇಗೆಬಂತು?

೨ನೇಯುವನು. ನನ್ನ ಕೈಗಳಿಂದ ಕೊಲ್ಲಿಸಿಕ್ಕೊಳ್ಳುವುದಕ್ಕೆ.

ಅನಂದವತಿ. ಆ ಪ್ರಸಕ್ತಿಯು ಈಗ ಪ್ರಯೋಜನವಿಲ್ಲ. ಈಗ ಪೊತ್ತಾಯಿತು. ಬಾ. (ಎಂದು ಎಬ್ಬಿಸುವುದಕ್ಕೆ ಹೋಗುವಳು.)

೧ನೇಯುವನು. ಅವನಿಂದ ಪ್ರಯೋಜನವಿಲ್ಲ. ಈಗ ನಾವು ನಿಮಗೆ ಶಾಶ್ವತ ಸೌಖ್ಯವನ್ನುಂಟುಮಾಡುವೆವು. (ಇಬ್ಬರೂ ಕಾಣಿಸಿಕೊಳ್ಳುವರು)

ಆನಂದವತಿ. ಇದೇನು, ಇಲ್ಲಿ ಯಾರೋ ಮಾತನಾಡುವಂತಿದೆ, ಯಾರಲ್ಲಿ ?

೨ನೇಯುವನು ನಿಮ್ಮಭಾಗದ ಮೃತ್ಯುಗಳು.

ಅನಂದವತಿ. ಕಟುಕರೆ, ಇದೇನು ಈ ನಿಶಿಯಲ್ಲಿ ಇಲ್ಲಿಗೆ ಬಂದಿರಿ?

ಕುಂಟ. ಪ್ರಿಯೇ, ಮುಂದೇನುಗತಿ?

೨ನೇಯುವನು. ನಿಮಗೆ ನಾವೇ ಗತಿ.

ಆನಂದವತಿ. ನಮ್ಮನ್ನು ಕೊಲ್ಲುವುದಕ್ಕೆ ಕಾರಣವೇನು? ಕ್ಷಮಿಸಿರಿ.

೧ನೇಯುವನು. ಇದಕ್ಕೆ ಕಾರಣವನ್ನು ನಿಮ್ಮ ತಂದೆಯನ್ನು ಕೇಳಿಕೋ. (ಆನಂದವತಿಯನ್ನೂ ಕುಂಟನನ್ನೂ ಶಿರಚ್ಛೇದನಮಾಡುವನು.)

ಕುಂಟ. ಪ್ರಿಯೆ. ಹಾಪ್ರಿಯೆ. (ಕೆಳಗೆ ಬೀಳುವನು.)

೨ನೇಯುವನು. ಸತ್ಪುರಷನಾಗಿದ್ದರೆ, ಪ್ರಾಣೋತ್ಕ್ರಮಣ ಕಾಲದಲ್ಲಿ ದೇವರ ಸ್ಮರಣೆಯು ಬರುತ್ತಿತ್ತು. ನೀಚರಿಗೆ ದೇವರ ಸ್ಮರಣೆಯು ಬರುವುದುಂಟೆ!

ಆನಂದವತಿ. ಅಯ್ಯೋ, ಪ್ರಾಣಕಾಂತನಾದ ಸೌಗಂಧಿಕನೆ, ಬಹು ಕಾಲನಿನ್ನಸಂಗಡ ಸಂತೋಷದಿಂದಿರಬೇಕೆಂದು, ಅಗ್ನಿಸಾಕ್ಷಿಯಾಗಿ ಮದುವೆ ಮಾಡಿಕೊಂಡು ಸುಂದರಾಂಗನಾದ ನಿನ್ನನ್ನು ಅನ್ಯಾಯ ವಾಗಿ ಕೊಂದೆನಲ್ಲ. ನನ್ನ ಆಶೆಯು ನಿಷ್ಫಲವಾಯಿತು. ಅಯ್ಯೋ, ನಿರಪರಾಧಿಯಾದ ಸೌಗಂಧಿಕನೆ.

ಗನೇಯುವನು. ಕೇಳಿದಿರಾ, ಈ ನೀಚಳು ಪತಿಹತ್ಯವನ್ನು ಮಾಡಿ ರುವಳಲ್ಲ! ಅಯ್ಯೋ, ನೀಚಳೆ, ರಾಜಪುತ್ರಿಯಾಗಿ ನಿನಗಿಂತಹ ದುರ್ಬುದ್ಧಿಯುಂಟಾಗಬಹುದೆ? ಅದಕ್ಕೆ ಈಗ ಸಫಲವಾಯಿತು. (ಹೋಗುವರು)

---

ಸ್ಥಾನ ೩.—ಅಂತಃಪುರ.

ರಾಜಹಂಸನೂ, ಸುನೀತಿಯೂ ಕೂತಿರುವರು.

(ವಸಂತಮಿತ್ರನ ಪ್ರವೇಶ)

ವಸಂತಮಿತ್ರ. ಭೂಪಾಲನೆ, ತಮ್ಮ ಅಳಿಯನನ್ನು ನಾನು ಕೊಂದೆ ನೆಂದು ಭಾವಿಸುವುದಾದರೆ ಶಿಕ್ಷೆಗೆ ಸಿದ್ಧನಾಗಿರುವೆನು.

ರಾಜಹಂಸ ನಿರಪರಾಧಿಯಾದ ನಿನ್ನನ್ನು ಕೊಂದು ಮಹಾಪಾತಿ ತ್ಯಕ್ಕೆ ಗುರಿಯಾಗುತ್ತಿದ್ದೆನಲ್ಲ. ಕ್ಷಮಿಸು. ನೀನು ಏನು ಹೇಳಿದರೂ ಅದರಂತೆ ನಡಿಸಿಕೊಡುವೆನು. ನೀನು ಯಾರು, ಇಲ್ಲಿಗೆಬರಲು ಕಾರಣವೇನು ?

ವಸಂತಮಿತ್ರ. ರಾಜನೆ, ನನಗೆ ಪ್ರಾಪ್ತವಾಗಿರುವ ಕಷ್ಟಗಳಲ್ಲಿ ಇದು ದೊಡ್ಡದಲ್ಲ. ನಾನು ನಿಮ್ಮ ಅಳಿಯನಾದ ಸೌಗಂಧಿಕನ ಮಂತ್ರಿಯು.

ಸುನೀತಿ ಹಾಗಿಲ್ಲದಿದ್ದರೆ ಇಂತಹ ಬುದ್ಧಿಯಿರುವುದೆಂದರೇನು!

ವಸಂತಮಿತ್ರ. ಸ್ವಾಮಿ, ಒಬ್ಬ ವೇಶ್ಯಾಂಗನೆಯ ದೆಶೆಯಿಂದ ನಮ್ಮಿಬ್ಬರಿಗೂ ಪರಸ್ಪರ ವೈಷಮ್ಯವುಂಟಾಗಿ, ಕೊನೆಗೆ ನಾನು ಆ ನೀಚಳ ದೆಶೆಯಿಂದಲೇ ರಾಜ್ಯಭ್ರಷ್ಟನಾದೆನು. ಆದರೂ ಅಡವಿಯಲ್ಲಿ ಅಲೆಯುತ್ತಾ ಮಾಂಡವಋಷಿಗಳ ಆಶ್ರಮವನ್ನು ಸೇರಿದೆನು.

ಸುನೀತಿ. ವಿವೇಕ ಹೇಳುವವರಗತಿಯಲ್ಲಾ ಹೀಗೆಯೇ ಅಲ್ಲವೆ? ಆದುದರಿಂದ ವಿವೇಕಿಗಳು ಹೇಳುವ ಬುದ್ಧಿವಾದಗಳನ್ನು ಕೇಳಬೇಕೆಂದು ಹೇಳುವುದಕ್ಕೆ ಇದು ಒಂದು ದೃಷ್ಟಾಂತವಾಗಿರುವುದು.

ವಸಂತಮಿತ್ರ. ಅನಂತರ ಸೌಗಂಧಿಕನಿಗೆ ಮದುವೆಯಾಗುವುದೆಂದು ಆ ಮಹಾತ್ಮರು ಹೇಳಿದುದರಿಂದ, ನಾನು ಹುಡುಕಿಕೊಂಡು ಈ ಸ್ಥಳಕ್ಕೆ ಬಂದರೆ ಕಾವಲುಗಾರರು ನನ್ನನ್ನು ಕೋಟೆಯೊಳಗೆ ಬಿಡಲಿಲ್ಲ.

ರಾಜಹಂಸ. ನಿನ್ನನ್ನೇನೋ.

ಸುನೀತಿ. ಈತನನ್ನೇ ಬಿಡಕೂಡದೆಂದು ಆಜ್ಞೆಯಾಗಿತ್ತು.

ವಸಂತಮಿತ್ರ. ಸ್ವಾಮಿ, ಅನಂತರ ಋಷಿವಾಕ್ಯದಂತೆ ಆ ಕುಟೀರದಬಳಿಗೆ ಬಂದು ನೋಡಲು, ಅಲ್ಲಿ ತಮ್ಮ ಕುಮಾರಿಗೆ ಕಾಣಿಸಿಕೊಳ್ಳದೆ, ಹಿಂದೆಯೇ ಹೋಗಿ, ವ್ಯಾಯಾಮಗೃಹದಲ್ಲಿ ಮಲಗಿದ್ದ ನನ್ನ ಪರಮಮಿತ್ರನನ್ನು ಈ ಹಾಳು ಕಣ್ಣುಗಳಿಂದ ನೋಡಿ, ಕೊನೆಗೆ ಮರಣವಾದುದನ್ನೂ ನೋಡಿದೆನು. ಇದೇ ನನ್ನ ಚರಿತ್ರೆಯು.

ಸುನೀತಿ. ಆಹಾ! ಮಿತ್ರತ್ವವೆಂಬುದು ಇದೇಅಲ್ಲವೇ. ಅವನನ್ನು ಹುಡುಕಿಕೊಂಡು ಬಂದು, ತನ್ನ ಕಷ್ಟವನ್ನು ಲಕ್ಷ್ಯೀಕರಿಸದೆ, ಸಾಧ್ಯವಾದರೆ ಸ್ನೇಹಿತನನ್ನು ಕಾಪಾಡಬೇಕೆಂದು ಹೇಳಿ, ತನ್ನ ಪ್ರಾಣಹಾನಿಗೂ ಭಯಪಡದೆಧೈರ್ಯದಿಂದ ಇದ್ದೆಯಲ್ಲ. ಅಯ್ಯಾ, ನೀನೇಮಿತ್ರನು. ವಿಧಿಯೆ, ನೀನು ಯಾರನ್ನುತಾನೆ ಕಷ್ಟಕ್ಕೆ ಈಡಾಗಿಸದೆ ಬಿಟ್ಟಿರುವೆ?

ಕಂದ ॥ ವಿಧಿವಶನಾಗಿಪಮಾಧವ
ನದೆಂತುರೆದಶಾವತಾರದಳೆಲಿಂನೊಂದಂ ॥
ಮದಿಸಿರ್ದಮಾನವರ್ಕಳ
ಪದವಿಯಕೆಂತುವಿಧಿನೀನೆಲೋಕದಿಪೂಜ್ಯಂ ॥೪೦॥

ರಾಜಹಂಸ. ನಿಜ, ನಿಜ, ಪರಮಾತ್ಮನನ್ನು ದಶಾವತಾರವನ್ನೆತ್ತುವಂತೆಯೂ, ಈಶ್ವರನನ್ನು ಭಿಕ್ಷಬೇಡುವಂತೆಯೂ ಮಾಡಿರುವೆ. ಹೀಗಿರಲು ಇಂತಹ ತೊಂದರೆಗೆ ಗುರಿಪಡಿಸಿದುದು ಆಶ್ಚರ್ಯವಲ್ಲ.

ವಸಂತಮಿತ್ರ. ರಾಜನೆ, ನನ್ನ ವಿಜ್ಞಾಪನೆಯೊಂದಿರುವುದು. ನನ್ನ ಮಿತ್ರನ ಶವವು ಕೆಡದಂತೆ ಒಂದು ಪೆಟ್ಟಿಗೆಯಲ್ಲಿಟ್ಟು ನನ್ನ ವಶಕ್ಕೆ

ಕೊಟ್ಟರೆ, ಆತನ ಉತ್ತರಕ್ರಿಯಾದಿಗಳನ್ನು ಮಾಡಲು ಗಂಗಾ ತೀರಕ್ಕೆ ತೆಗೆದುಕೊಂಡು ಹೋಗುವೆನು. ಇದೇ ನನ್ನ ಕೋರಿಕೆಯು. ಇದನ್ನು ನೆರವೇರಿಸಿಕೊಡಬೇಕು. (ನಮಸ್ಕರಿಸುವನು)

ರಾಜಹಂಸ. ಮಂತ್ರಿಯೆ, ಈತನ ಯೋಚನೆಯು ಯೋಗ್ಯವಾಗಿರುವುದಾದುದರಿಂದ, ಈತನ ಮನೋಗತವನ್ನು ನೆರವೇರಿಸಿಕೊಡು. ನಾನು ಹೋಗುವೆನು. (ಹೋಗುವನು.)

ಸುನೀತಿ. ಪುಣ್ಯಾತ್ಮನೆ, ಬಾ ನಿನ್ನಿಷ್ಟದಂತೆ ನೆರವೇರಿಸಿಕೊಡುವೆನು. (ಹೋಗುವನು.)

ವಸಂತ. ಈಗ ಸನ್ಯಾಸಾಶ್ರಮವನ್ನು ತಾಳಿ ನನ್ನ ಮಿತ್ರನ ಶವವನ್ನು ತೆಗೆದುಕೊಂಡು ಗಂಗಾತೀರಕ್ಕೆ ಹೊರಡುವೆನು. (ಹೋಗುವನು)

---

## ಸ್ಥಾನ ೪.—ಬೆಟ್ಟಗುಡ್ಡಗಳು.

(ವಸಂತಮಿತ್ರನು ಯತಿವೇಷವನ್ನು ಧರಿಸಿ, ತನ್ನ ಮಿತ್ರನ ಶವವನ್ನು ಹಾಕಿದ ಒಂದು ಪೆಟ್ಟಿಗೆಯನ್ನು ಹಿಡಿದುಕೊಂಡು ಪ್ರವೇಶಿಸುವನು)

ವಸಂತಮಿತ್ರ. * ಆನಂದವತಿಯ ಕೋಪಾಗ್ನಿಗೆ ಬೀಳದೆ ತಪ್ಪಿಸಿಕೊಂಡು ಬಂದುದೇ ದುಸ್ತರವಾಯಿತಲ್ಲಾ! ಪ್ರಪಂಚದಲ್ಲಿ ಪಾಂಚಭೌತಿಕವಾದ ಈ ಕಾಯವನ್ನು ನಚ್ಚಿ. ನಾನೇ ಶಾಶ್ವತನೆಂದು ಅಹಂಕಾರ ಪಡುತ್ತಿರುವವರು, ಅಸ್ಥಿ, ಚರ್ಮ ಮತ್ತು ರಕ್ತ ಮೊದಲಾದವುಗಳಿಂದ ಕೂಡಿ ಅಸ್ಥಿರವಾದ ದೇಹವನ್ನು ಅತ್ಯಲ್ಪವೆಂದು ಭಾವಿಸಿದ ಅನೇಕ ಮಹನೀಯರು ಇಹಸುಖವನ್ನು ತ್ಯಜಿಸಿ, ಪರಲೋಕ

---

* ರಾಗ.—ಹಿಂದುಸ್ಥಾನಿ. ರೂಪಕ.

ಮಾಡಿದಾಪರಾಧವು । ತೋರದೆನಗೆ ॥ಪ॥ ಸುಂದರನ ನೀಗುತೆ । ಮಂದಭಾಗ್ಯಸಾದೆ ॥ ದಂದುಗವನುಳಿಯುತಾ । ನಂದವೆಂತು ತಾಳುವೆ ॥೧॥ ಸುಗುಣ ನಿನ್ನನುಳಿದು ಗಳಿಗೆ । ಯುಗದ ಪರಿಭಾವಿಪೆ ॥ ನಗೆಯು ಮೊಗವ ನೋಳ್ಪ ಪುಣ್ಯ । ಬಗೆಯಕಾಣದಾದೆನೆ ॥೨॥ ಅಸಮಶರ ಹರನಕೃಪಾ । ವಶನಾಗುತಿಂತು ಬಾಳ್ವೆ ॥ ರಸೆಯೊಳೀಪರಿ ಘಾಸಿಯೊಡೆದು । ಅಸುವನಿಂತು ತಾಳಿಹೆ ॥೩॥

ಸಾಧನೆಗೆ ಸನ್ಮಾರ್ಗವನ್ನವಲಂಬಿಸಿ, ಇಂದ್ರಿಯಗಳನ್ನು ಸ್ವಾಧೀನದಲ್ಲಿಟ್ಟುಕೊಂಡು, ನಾದಾನುಸಂಧಾನಂಗಳಿಂದ ಆ ಪರಬ್ರಹ್ಮನನ್ನು ತಿಳಿದು ನಿತ್ಯಾನಂದವನ್ನು ಹೊಂದುವವರಿಗೆ ನನ್ನ ನಮಸ್ಕಾರವು. (ಆಕಾಶದಕಡೆಗೆ ನೋಡಿ) ಅಹಾ! ಸೂರ್ಯನಾದರೋ, ಗಗನದ ಮಧ್ಯ ಭಾಗಕ್ಕೆ ಬಂದನು. ಎಲೈ ಮಾರ್ತಾಂಡನೆ,

ಕಂದ ॥ ಅರುಣನೆ ನೀನುರೆ ಗಗನಾಂ
ತರದೊಳ್ ಸಂಚರಿಸುತೆಲ್ಲರಂ ತಪಿಪೆನ್ನೀ ॥
ಪರಿಯೊಳಿಗೆಯುಳಿವುದೆನು
ತ್ತುರುಶೌರ್ಯವನೆನ್ನೊಳಿಂತು ತೋರುವೆಮುನಿಸಂ ॥ ॥೪೧॥

ಇನ್ನು ಸಾವಕಾಶಮಾಡದೆ ಈ ಪೆಟ್ಟಿಗೆಯನ್ನು ಈ ಮರದ ನೆರಳಲ್ಲಿಟ್ಟು, ಹತ್ತಿರ ಕಾಣಿಸುವ ಈ ನದಿಯಲ್ಲಿ ನಿತ್ಯಕರ್ಮಗಳನ್ನು ತೀರಿಸಿಕೊಂಡು ಮುಂದಕ್ಕೆ ಪ್ರಯಾಣ ಮಾಡುವೆನು.

(ಪೆಟ್ಟಿಗೆಯನ್ನು ಒಂದು ಮರದಡಿಯಲ್ಲಿಟ್ಟು ಹೋಗುವನು.)

ಶ್ರೀನಿಧಿಪಟ್ಟಣದ ಮಂತ್ರಿಯಾದ ಕುಶಲಮತಿಯ ಪ್ರವೇಶ.

ಕುಶಲಮತಿ. ನಮ್ಮ ಮಹಾರಾಜನಾದ ಸತ್ಯನಿಧಿಗೆ ನಾನಾ ದೇಶದ ಮಹಾರಾಜರ ಭಾವಚಿತ್ರಗಳನ್ನು ತಂದು ತೋರಿಸಿದಾಗ್ಯೂ, ತನ್ನ ಕುಮಾರಿಯಾದ ಶುಭಾಂಗಿಯು ಯಾವ ವರನನ್ನೂ ವರಿಸಲಿಲ್ಲವೆಂದು ಹೇಳಿ ಪದೆ ಪದೆ ನನ್ನನ್ನು ಹಿಂಸಿಸುತ್ತಿರುವನು. ಏನು ಮಾಡಲಿ. ದೇಶಾಟನದಿಂದ ದೇಹಾಯಾಸವು ವಿಪರೀತವಾಗಿರುವುದು. ಮುಂದೆ ಕಾಣುವ ಆ ರಾಜ್ಯಕ್ಕಾದರೂ ಹೋಗುವೆನು. ಈ ಮರದ ನೆರಳಿನಲ್ಲಿ ಸ್ವಲ್ಪಹೊತ್ತು ವಿಶ್ರಮಿಸಿಕೊಂಡು ಮುಂದಕ್ಕೆ ಪ್ರಯಾಣ ಮಾಡುವೆನು. ಈ ಮಾರುತನಾದರೋ

ವೃತ್ತ ॥ ಚಂದದಿಂದಲೆ ಮಂದಮಾರುತನಿಂದುಪುಷ್ಪಮನೈದೆತಾಂ।
ಬಂದು ಸೋಂಕಿದೆನೆಂಬಕಾರಣದಿಂದೆಭೀತಿಯನೊಂದುತಂ॥
ಮಿಂದು ವಾರಿಧಿಯಲ್ಲಿ ಮೋದದದೆವಾರಿಶೀಕರವಾನುತಂ।
ಕುಂದಪುಷ್ಪಮರಂದಪಾನುತೆಮಂದಯಾನದೆಬೀಸುವಂ ॥೪೨॥

(ಸ್ವಲ್ಪ ಮುಂದಕ್ಕೆ ಹೋಗಿ) ಇದೇನಾಶ್ಚರ್ಯ, ಅನೇಕ ಮೊಹರುಗಳಿಂದ ಕೂಡಿರುವ ಈ ಪೆಟ್ಟಿಗೆಯು ಇಲ್ಲಿ ಬಿದ್ದಿರುವುದಕ್ಕೆ ಕಾರಣವೇನು! (ಯೋಚಿಸಿ) ಒಂದುವೇಳೆ ಚೋರರೇನಾದರೂ ತಂದು ಹಾಕಿರಬಹುದೆ! ಧನದಿಂದ ತುಂಬಿರುವುದಾದರೆ ಕಳ್ಳರು ಹೀಗೆ ಬಿಟ್ಟು ಹೋಗುವುದೆಂದರೇನು!

ಸ್ವಲ್ಪಮರೆಯಾಗಿ ನಿಂತು ಏನಾಗುವುದೋ ನೋಡುವೆನು. (ಮರೆಯಲ್ಲಿ ನಿಂತಿರುವನು )

(ವಸಂತಮಿತ್ರನ ಪ್ರವೇಶ.)

ವಸಂತಮಿತ್ರ. ನಿತ್ಯಕರ್ಮಗಳನ್ನು ತೀರಿಸಿಕೊಂಡುದಾಯಿತು. ಇನ್ನು ಗಂಗಾತೀರಕ್ಕೆ ಹೊರಡುವೆನು. (ಸ್ವಲ್ಪ ಮುಂದೆ ಹೋಗುತ್ತಿರುವನು.)

ಕುಶಲಮತಿ. ಈತನ ಮುಖವನ್ನು ನೋಡಿದುದಾದರೆ ಏನೋ ಒಂದು ವಿಧವಾಗಿ ಮನಸ್ಸಿಗೆ ಹೊಳಿಯುತ್ತಿರುವುದು. ಈತನಾರಾಗಿರಬಹುದು?

ವಸಂತಮಿತ್ರ* (ಪೆಟ್ಟಿಗೆಯನ್ನು ನೋಡಿ) ನಿನ್ನ ಸುಂದರಾಸ್ಯವೆಲ್ಲಿ ? ಮಂದಹಾಸವೆಲ್ಲಿ? ನಿನ್ನ ಚತುರೋಕ್ತಿಯೆಲ್ಲಿ ? ಇವುಗಳೆಲ್ಲಾ ನನ್ನ ದುಃಖಸಾಗರದಲ್ಲಿಯೇ ಮುಳುಗಿಹೋದವೇ ? ನಾನು ಇಷ್ಟು ಕಷ್ಟಪಡುತ್ತಿದ್ದರೂ ಸಂತೋಷದಿಂದ ಸುಖನಿದ್ರೆ ಮಾಡುತ್ತಿರುವೆಯೋ ? ಒಂದು ಮಾತನ್ನೂ ಆಡುವದಿಲ್ಲವೆ ? ಬೇಡ, ಹಠ ಮಾಡಬೇಡ. ನನ್ನನ್ನು ನಿನ್ನ ಪ್ರಿಯಮಿತ್ರನೆಂದು ಹೇಳಿಕೊಳ್ಳಲಿಲ್ಲವೆ' ಸ್ನೇಹಿತರಲ್ಲಿ ಮಾತನಾಡದಷ್ಟು ಮಾತ್ಸರ್ಯವನ್ನು ಬೆಳೆಸಬಹುದೆ ? ಇದು ಲೋಕವಿರುದ್ಧವಲ್ಲವೆ? ಅಂಥವನಮೇಲೆ ಕೋಪವೆ? ಕೋಪವನ್ನು ಮುಖ್ಯವಾಗಿಟ್ಟುಕೊಂಡರೆ ಇದರಿಂದ ಚಿತ್ತವೃತ್ತಿಯು ಪಲ್ಲಟವಾಗಿ

---

* ರಾಗ.—ನಾದನಾಮಕ್ರಿಯ ರೂಪಕ.

ಸರಸವಾಡಿದುದೆಲ್ಲಿ । ಮರುಕತೋರಿದುದೆಲ್ಲಿ ॥ ಸರಸಮುಖವತೊರು । ಸರಳಹೃದಯನೆ ॥ ಪ॥ ಸುಂದರಾಶ್ಯವಕಂಡಾ । ನಂದವಾನುವೆಸಖ ॥ ವಂದಿಸುವೆನು ನಿನಗೆ । ಒಂದುಮಾತಾಡು ॥೧॥ ಪ್ರಾಣವೆಯೆನ್ನಯ । ಪ್ರಾಣಸಖನೊಳು ॥ ಜಾಣತನದಿಚೆರೆದು । ಪ್ರಾಣವನುಳಿಪೆಯ ॥೨॥

ಮನೋಧಾರ್ಢ್ಯವು ಕುಂದಿ, ತನ್ನ ಕರ್ತವ್ಯವನ್ನೇ ಮರೆತು ವಿವೇಕ ಹೀನನಾಗಿ, ಶಕ್ತಿಯುಡುಗಿ ಬಹಳ ಅನರ್ಥಗಳಿಗೊಳಗಾಗುವ ಅಂಶ ವನ್ನು ನೀನೇ ನನಗೆ ಬೋಧಿಸಲಿಲ್ಲವೆ ? ವೃಥಾ ಚಿಂತೆಗೆ ನನ್ನನ್ನು ಗುರಿಪಡಿಸುವುದು ಸ್ನೇಹಕ್ಕೆ ತುಂಬಾ ಕೊರತೆಯೆಂದು ನೀನೂ ಬಲ್ಲೆ. ಕಣ್ಣುತೆರೆದು ನೋಡುವೆಯಾ? ಈಗ ನನ್ನಮೇಲೆ ಕನಿ ಕರ ಹುಟ್ಟಿತೆ? ಮುತ್ತುಕೊಡಲೆ (ಮುತ್ತಿಡುವನು ಭ್ರಾಂತಿಯಿಂದ ಬೇರೆ ಕಡೆಗೆ ತಿರುಗಿ) ಇದೇನು. ನನಗೆ ಭ್ರಾಂತಿಯೋ, ಕನಸೋ, ಮರು ಳೋ ? ಸತ್ತವರು ಮಾತನಾಡುವುದೆಂದರೇನು! ಮಿತ್ರನ ವಿಯೋ ಗದಿಂದ ನನ್ನ ಬುದ್ಧಿಯು ಮಲಿನವಾಗಿ, ಆತನೊಡನೆ ಮಾತನಾಡು ತ್ತಿದ್ದಂತೆಯೇ ಇರುವೆನು. ಇವುಗಳಿಗೆಲ್ಲಾ ನನ್ನ ಅವಿಚ್ಛಿನ್ನವಾದ ಪ್ರೀತಿಯೇ ಕಾರಣವಾಗಿರಲು, ಆತನು ನನ್ನ ಮುಂದೆಯೇ ಬಂದು ನಿಂತು ಮಾತನಾಡುತ್ತಿದಂತೆ ಮನಸ್ಸಿಗೆ ಹೊಳೆಯುವುದು. ಇಂತಹ ಸ್ನೇಹಿತನನ್ನುಮತ್ತೆಲ್ಲಿ ಕಾಣಲಿ.

ಕುಶಲಮತಿ ಈತನು ಯತಿವೇಷದಿಂದಿರುವುದೇನು ! ಈತನು ಮಾತನಾಡುವುದೇನು ! ಇದರಿಂದ ನನಗೆ ಅನುಮಾನವಾಗಿದೆ. ಒಳ್ಳೇದು ಹತ್ತಿರಕ್ಕೆ ಹೋಗಿ ಮಾತನಾಡಿಸಿ ನೋಡುವೆನು. (ಹತ್ತಿರಕ್ಕೆ ಬಂದು) ಮಹಾನುಭಾವರೆ ? ನಮಸ್ಕರಿಸುವೆನು.

ವಸಂತಮಿತ್ರ. ಅಯ್ಯಾ, ನಿನಗೆ ಜಯವಾಗಲಿ. ನೀನುಯಾರು, ಎಲ್ಲಿ ಹೋಗುವೆ ?

ಕುಶಲಮತಿ. ನಾನು ನಮ್ಮ ಮಹಾರಾಜನಾದ ಸತ್ಯನಿಧಿಯ ಮಂತ್ರಿಯು. ನನ್ನಹೆಸರು ಕುಶಲಮತಿ. ನಮ್ಮ ಭೂಪಾಲನ ಮಗ ಳಾದ ಶುಭಾಂಗಿಗೆ ಲಗ್ನಕಾಲವಾಗಿರುವುದರಿಂದ ಅನೇಕ ರಾಜಾಧಿ ರಾಜರ ಭಾವಚಿತ್ರಗಳನ್ನು ತಂದು ತೋರಿಸಿದಾಗ್ಯೂ ಒಪ್ಪದೆ, ಪದೆ ಪದೆ ತೊಂದರೆ ಪಡಿಸುತ್ತಿರುವನು. ನಾನು ವರಾನ್ವೇಷಣಾರ್ಥ ವಾಗಿ ಪ್ರಯಾಣಮಾಡುತ್ತಿರುವೆನು. ಆದರೆ ನನ್ನ ಕೋರಿಕೆಯೊಂ ದಿರುವುದು.

ವಸಂತಮಿತ್ರ. ನಿನ್ನಕೋರಿಕೆಯೇನು?

ಕುಶಲಮತಿ. ತಾವು ಈ ಆಶ್ರಮವನ್ನು ತಾಳಿ ಎಷ್ಟು ದಿವಸಗಳಾದವು. ಇದಕ್ಕೆ ಕಾರಣವೇನು. ದಯವಿಟ್ಟು ಹೇಳಬೇಕಾಗಿ ಬೇಡಿಕೊಳ್ಳುವೆನು.

ವಸಂತಮಿತ್ರ. (ಸ್ವಗತಃ) ಓಹೋ, ಈತನು ನಾನು ಪೆಟ್ಟಿಗೆಯನ್ನು ನೋಡಿ ಹಂಬಲಿಸಿದುದನ್ನುಕೇಳಿ, ನನ್ನ ಅಂತರ್ಯವನ್ನು ತಿಳಿದುಕೊಂಡಿರುವಂತೆ ತೋರುವುದು. ಸುಳ್ಳು ಹೇಳಲಾರೆ. ನನ್ನ ಅಂತರ್ಯವನ್ನು ಈತನೊಡನೆ ಹೇಳಿದುದರಿಂದ ಬಾಧಕವೇನು? ಏಕೆಂದರೆ, ಮನುಷ್ಯನು ತನ್ನ ದುಃಖವನ್ನು ಇತರರೊಡನೆ ಹೇಳಿಕೊಂಡರೆ ಸ್ವಲ್ಪ ಸ್ವಲ್ಪ ಕಮ್ಮಿಯಾಗುವುದು. (ಕುಶಲಮತಿಯನ್ನುನೋಡಿ) ನನ್ನ ಮಿತ್ರನು ತನ್ನ ಪತ್ನಿಯಿಂದಲೇ ದುರ್ಮರಣವಾದುದರಿಂದ ನನ್ನ ಸಾಹಸದಿಂದ ಆತನ ಶವವನ್ನು ಈ ಪೆಟ್ಟಿಗೆಯಲ್ಲಿಟ್ಟುಕೊಂಡು ಕರ್ಮಾಂತರಗಳನ್ನು ನಡೆಸಲು ಗಂಗಾತೀರಕ್ಕೆ ಹೊರಟಿರುವೆನು.

ಕುಶಲಮತಿ. ಹಾಗಾದರೆ ಈ ಪೆಟ್ಟಿಗೆಯನ್ನು ಕೆಳಕ್ಕೆ ಇಡಿ. ಪರರಕಷ್ಟವು ತಮ್ಮದೆಂದು ಭಾವಿಸಿ, ಅವರ ಕಷ್ಟವನ್ನು ನಿವಾರಣೆ ಮಾಡುವುದು ಯೋಗ್ಯವೆಂದು ಭಾವಿಸುವುದಾದರೆ ನನ್ನ ವಿಜ್ಞಾಪನೆಯನ್ನು ಬಿನ್ನಹ ಮಾಡುವೆನು.

ವಸಂತಮಿತ್ರ. ನಿನಗೆ ಪ್ರಾಪ್ತನಾಗಿರುವ ಅಂತಹ ದುರ್ಘಟವಾದ ಕಷ್ಟವಾವುದು?

ಕುಶಲಮತಿ. ಮತ್ತಾವುದೂ ಇಲ್ಲ. ಕೇಳಿ, ವರಾನ್ವೇಷಣದಿಂದ ತೊಳಲಿ ಬಳಲುತ್ತಿರುವ ನನ್ನ ಮನಸ್ಸಿಗೆ ಸ್ಥಿಮಿತತೆಯನ್ನುಂಟು ಮಾಡಿಕೊಳ್ಳಲು, ನಿಮ್ಮಂತಹ ಯತಿಗಳನ್ನು ಯೋಗ್ಯತಾನುಸಾರ ಆಚಾರೋಪಚಾರಗಳಿಂದ ತೃಪ್ತಿಪಡಿಸುವುದು ಯೋಗ್ಯವೆಂದು ಭಾವಿಸಿರುವೆನು. ಆದುದರಿಂದ ನಮ್ಮ ಮನೆಗೆ ದಯಮಾಡಿಸಿದರೆ ನನ್ನ ಗೃಹವೂ ಪವಿತ್ರವಾಗುವದಲ್ಲದೆ, ಕೊಡಲ್ಪಟ್ಟ ಅಥಿತಿಸತ್ಕಾರದಿಂದ ತೃಪ್ತಿಪಟ್ಟು ಮುಂದಕ್ಕೆ ದಯಮಾಡಿಸಬೇಕೆಂಬುದೇನನ್ನ ವಿಜ್ಞಾಪನೆ.

ವಸಂತಮಿತ್ರ. (ಯೋಚಿಸಿ) ನನ್ನ ಮಿತ್ರನ ಉತ್ತರಕ್ರಿಯಾದಿಗಳನ್ನು ನೆರವೇರಿಸಬೇಕಾಗಿರುವುದರಿಂದ ಬರಲು ಅವಕಾಶವಾಗಲಾ

ರನು. ಕ್ಷಮಿಸು. ಅಲ್ಲದೆ ಶವವನ್ನು ಊರಿನೊಳಗೆ ತೆಗದುಕೊಂಡು ಬರಬಹುದೆ ?

ಕುಶಲಮತಿ. ನಿಮ್ಮ ಸಖನು ಪಾಪಿಷ್ಟನಾಗಿದ್ದುದರಿಂದೇ ದುರ್ಮ ರಣ ಪ್ರಾಪ್ತವಾಯಿತು. ಇದರಿಂದ ಆತನಿಗೆ ಗಂಗಾತೀರವು ಯೋಗ್ಯ ವಲ್ಲ. ನಮ್ಮ ಊರಿನ ಹೊರಗಿರುವ ದಕ್ಷಿಣ ಸ್ಮಶಾನದಲ್ಲಿ ಆತನ ಕ್ರಿಯಾದಿಗಳನ್ನು ಮಾಡಲು ನಮ್ಮ ಭೂಪನಿಗೆ ಹೇಳಿ ತಕ್ಕ ಉಪಕ ರಣಗಳನ್ನು ತಮಗೆ ಅನುಗೊಳಿಸಿಕೊಡುವೆನು.

ವಸಂತಮಿತ್ರ. (ಸ್ವಗತಃ) ಈತನು ಹೇಳುವುದು ಸಹಜವೇ ಸರಿ. ನನ್ನ ಮಿತ್ರನ ಶವವನ್ನು ದಹನಮಾಡಿದನಂತರ, ಆತನ ಅಸ್ಥಿಯನ್ನು ತೆಗೆದುಕೊಂಡು ಹೋಗುವುದು ಯೋಗ್ಯವೆಂದು ತೋರುವುದು. ಈ ಕೆಲಸವನ್ನು ನಾನೇ ನೆರವೇರಿಸಲು ನನ್ನಲ್ಲಿ ಒಂದು ಕಾಸಿಗೂ ಮಾರ್ಗವಿಲ್ಲ. ಈತನ ಯೋಚನೆಯು ಸ್ತೋತ್ರಾರ್ಹವಾದುದೇಸರಿ. (ಮಂತ್ರಿಯನ್ನು ನೋಡಿ) ಜೀವಿಗಳಿಗುಂಟಾದ ಕಷ್ಟವನ್ನು ನಿವಾರಣೆ ಮಾಡುವುದೇ ನಮ್ಮಂತಹ ಸನ್ಯಾಸಿಗಳ ಮುಖ್ಯ ಕರ್ತವ್ಯವು. ಒಳ್ಳೇದು ಬರುವೆನು. ಆದರೆ ನನ್ನ ಮಿತ್ರನ ಉತ್ತರಕ್ರಿಯಾದಿಗಳನ್ನು ನೆರ ವೇರಿಸಿದಮೇಲೆ ಅಸ್ಥಿಗಳನ್ನು ನಾನು ಗಂಗಾತೀರಕ್ಕೆ ತೆಗೆದುಕೊಂಡು ಹೊರಡಲು ನೀನು ಒಪ್ಪಬೇಕು.

ಕುಶಲಮತಿ. ನಿಮ್ಮಭಿಪ್ರಾಯದಂತೆ ನಡೆದುಕೊಳ್ಳುವೆನು. (ವಸಂತ ಮಿತ್ರನು ಮುಂದಕ್ಕೆ ಹೊರಡಲು) ಈಗ ಈ ಯತಿಯು ನನ್ನ ಮಾತಿಗೆ ಒಪ್ಪಿರುವನು. ಈತನು ರಾಜಲಕ್ಷಣ ಸಂಪನ್ನನಾಗಿರುವುದರಿಂ ದಲೂ, ಸುಂದರನಾಗಿರುವುದರಿಂದಲೂ ಈತನನ್ನು ನಮ್ಮ ಮಹಾ ರಾಜನ ಮಗಳಿಗೆ ತಕ್ಕ ವರನಾಗಿರುವಂತೆ ತೋರುವುದು. ಇದಕ್ಕೆ ನನ್ನ ಚಮತ್ಕಾರವನ್ನುಪಯೋಗಿಸುವೆನು. (ಹೋಗುವನು.)

ವೃತ್ತ ॥ ಧರಣೀರಮಣೀಕರಪಲ್ಲವಮಂ ।
ಕರುಣಾಕರನೀಂಪಿಡಿದುಂಸತತಂ ॥
ಪರರಂಗಿತಮಂತಿಳಿದುಂಪಿರಿದಾ ।
ದರದಿಂಪೊರೆದುಂಪಡೆಯ್ವೈಜಸಮಂ ॥೪೩॥

ತೃತೀಯಾಂಕಂ ಸಂಪೂರ್ಣಂ.

# ಚತುರ್ಥಾಂಕಂ.

---o---

## ಸ್ಥಾನ.೧— ಅಮೃತಶೇಖರೀ ಪಟ್ಟಣದ ಒಂದು ಬೀದಿಯಲ್ಲಿ

(ವಸಂತಮಿತ್ರನು ಯತಿವೇಷದಿಂದ ಪ್ರವೇಶಿಸುವನು)

ವಸಂತಮಿತ್ರ. ಈ ದೇಹವು ಅಶಾಶ್ವತವಾದುದು. ನೋಡುವುದಕ್ಕೆ ಎಷ್ಟು ಸುಂದರವಾದಾಗ್ಯೂ ಮಾಂಸ, ರಕ್ತ, ಮೂಳೆ, ಇವುಗಳಿಂದ ಕೂಡಿ ಅತ್ಯಂತ ಹೇಯವಾಗಿರುವುದರಿಂದ ಜ್ಞಾನಿಗಳು ಇಹಲೋಕದ ಆಶೆಯನ್ನೇ ತೊರೆದು, ಮೂಢರಿಗೆ ತಾವು ಹುಚ್ಚರಂತೆ ಕಾಣಿಸಿಕೊಳ್ಳುತ್ತಾ ಪರಮಾತ್ಮನ ಪ್ರೀತಿಗೆ ಪಾತ್ರರಾಗಿರುವರು. ಆದುದರಿಂದ ಈ ಅನಿತ್ಯವಾದ ದೇಹ ಸೌಖ್ಯವನ್ನೇ ಬಯಸುತ್ತಿರುವ ಈ ಲೋಕವು, ಅದರ ಚರಿತ್ರೆಯನ್ನು ಕೇಳಿದರೆ ತುಂಬ ಆಶ್ಚರ್ಯವನ್ನುಂಟುಮಾಡದೆ ಇರಲಾರದು.

ಈ ಪ್ರಪಂಚವು ಒಂದು ರಂಗಸ್ಥಳವು. ಸ್ತ್ರೀ ಪುರುಷರೆಲ್ಲರೂ ವೇಷಧಾರಿಗಳು. ಜನನ ಮರಣಗಳೇ ರಂಗಕ್ಕೆ ಪ್ರವೇಶ ನಿಷ್ಕ್ರಾಂತಗಳು. ಮನುಷ್ಯನ ಜೀವಮಾನವು ಏಳು ಅಂಕಗಳಾಗಿರಲು, ಇವುಗಳಲ್ಲಿ ವಿಚಿತ್ರವೇಷಗಳನ್ನು ಧರಿಸುವನು. (೧) ಮೊದಲನೆಯ ಅಂಕವಾದ ಶೈಶವಾವಸ್ಥೆಯಲ್ಲಿ ಮಾತೆಯ ತೊಡೆಯಮೇಲೆ ಅಳುತ್ತಲೂ, ಕಾರುತ್ತಲೂ ಅಜ್ಞಾನದಿಂದಿರುವನು. (೨) ಎರಡನೆಯ ಅಂಕವಾದ ಬಾಲ್ಯದಲ್ಲಿ ಸುಂದರವಾದ ಮುಖದಿಂದ ಪ್ರಕಾಶಿಸುತ್ತಾ, ಪ್ರಾತಃಕಾಲದಲ್ಲಿ ಪುಸ್ತಕಗಳನ್ನು ಹಸ್ತಗಳಲ್ಲಿ ಹಿಡಿದುಕೊಂಡು, ಗೊಣಗುಟ್ಟುತ್ತಾ ಮನಸ್ಸಿಲ್ಲದೆ ಬಸವನ ಹುಳದಂತೆ ನಿಧಾನವಾಗಿ ಮಠಕ್ಕೆ ಹೋಗುವನು. (೩) ಮೂರನೆಯ ಅಂಕವಾದ ಯೌವನದಲ್ಲಿ ಮದೋನ್ಮತ್ತನಾಗಿ, ವಿರಹತಾಪದಿಂದ ನಿಟ್ಟುಸಿರು ಬಿಡುತ್ತಲೂ, ಪ್ರಿಯಳನ್ನು ಬಣ್ಣಿಸಿ ವ್ಯಾಕುಲದಿಂದ ಹಾಡುತ್ತಲೂ ಇರುವನು. (೪) ನಾಲಕನೆಯ ಅಂಕವಾದ ಕೌಮಾರಾವಸ್ಥೆಯಲ್ಲಿ ಒಳ್ಳೆಯ ಪದವಿಯನ್ನೂ ದ್ರವ್ಯವನ್ನೂ ಸಂಪಾದಿಸುತ್ತಲೂ, ಅತಿ

ಪ್ರಯಾಸದಿಂದ ಕೀರ್ತಿ ಪಡೆಯಬೇಕೆಂಬ ಆಶೆಯಿಂದ ಗುಂಡಿನೆದುರಿಗೆ ನಿಲ್ಲುವುದಕ್ಕೂ ಹೆದರನು. (೫) ಐದನೆಯ ಅಂಕವಾದ ಸ್ಥವಿರಾವಸ್ಥೆಯಲ್ಲಿ ಲೋಕ ವ್ಯಾಪಾರವನ್ನರಿತು, ಅನೇಕ ಇತಿಹಾಸಗಳಿಂದಲೂ, ನೀತಿಬೋಧಕವಾದ ಗಾಥೆಗಳಿಂದಲೂ ಪ್ರಪಂಚಕ್ಕೆ ನ್ಯಾಯವನ್ನು ತೋರಿಸುತ್ತಾ, ಪುಷ್ಕಳವಾಗಿ ಭುಂಜಿಸಿ ಸ್ಥೂಲದೇಹದಿಂದೊಪ್ಪುತ್ತಾ ಪಂಚಾಯಿತನಂತಿರುವನು. (೬) ಆರನೆಯ ಅಂಕವಾದ ಜರಾವಸ್ಥೆಯಲ್ಲಿ ಅಂಗವು ವಿಗಳಿತವಾಗಿರಲು, ಪೂರ್ವದಲ್ಲಿ ಚೆನ್ನಾಗಿ ಕಾಪಾಡಿಕೊಂಡಿದ್ದ ಶರೀರಕ್ಕೆ ಈಗ ಬಹಳ ಸಡಿಲವಾದ ಅಂಗಿಗಳನ್ನು ತೊಟ್ಟು, ಸುಲೋಚನವನ್ನಿಟ್ಟು, ಪಾದರಕ್ಷೆಗಳನ್ನು ಮೆಟ್ಟಿ, ಕೈಯಲ್ಲಿ ದೊಣ್ಣೆಯನ್ನು ಹಿಡಿದುಕೊಂಡು, ಹಾಸ್ಯಕ್ಕಾಕರನಾಗಿ ಅತ್ಯಾಶೆಯಿಂದಿರುವನಲ್ಲದೆ, ಮೊದಲಿನ ಸ್ವರವು ತಗ್ಗಿ, ಮಕ್ಕಳಂತೆ ಕೀರಧ್ವನಿಯನ್ನು ಹೊಂದಿ, ಗಂಟಲಿನಲ್ಲಿ ನಾನಾ ವಿಧವಾದ ಸ್ವರಗಳು ಉತ್ಪತ್ತಿಯಾಗುವುವು. (೭) ಅತ್ಯಾಶ್ಚರ್ಯಕರವಾದ ನರಲೀಲೆಯೆಂಬ ನಾಟಕದ ಕೊನೆಯ ಅಂಕವಾದ ಅಂತ್ಯಾವಸ್ಥೆಯಲ್ಲಿ, ಶೈಶವಾವಸ್ಥೆಯನ್ನು ಪುನಃ ತೋರ್ಪಡಿಸುತ್ತಾ, ಜ್ಞಾನ ಹೀನನಾಗಿ ದಂತಗಳುದುರಿ, ಕಣ್ಣು ಕಾಣದೆ, ರುಚಿತಪ್ಪಿ, ಸಕಲೇಂದ್ರಿಯಗಳೂ ನಷ್ಟವಾಗುವುವು.

ಆದುದರಿಂದ ಇಂತಹ ಅನಿರ್ವಚನೀಯವಾದ ಸ್ಥಿತಿಯಲ್ಲಿರುವ ಮನುಷ್ಯನ ಜೀವಮಾನವನ್ನು ಐಹಿಕ ಸುಖದಲ್ಲಿ ನೆಲೆಗೊಳಿಸಿಕೊಳ್ಳದೆ, ಸ್ಥಿರಚಿತ್ತದಿಂದ ವಿಷಯ ವಿಮುಖನಾಗಿ, ಇಂದ್ರಿಯ ನಿಗ್ರಹದಿಂದ ಪರಮಾತ್ಮನನ್ನು ಸದಾ ಧ್ಯಾನಮಾಡುತ್ತಾ, ಸದ್ಭಕ್ತಿಯಿಂದ ಪೂಜಿಸುತ್ತಾ, ಪರಲೋಕವನ್ನು ಪಡೆದು, ದೇವನ ಸಂದರ್ಶನದಿಂದ ಪುನರ್ಜನ್ಮವನ್ನು ಹೊಂದದಿರುವಂತೆ ಪ್ರತಿಯೊಬ್ಬನೂ ಮಾಡಿಕೊಳ್ಳುವುದಕ್ಕೆ ಪ್ರಯತ್ನ ಪಡಬೇಕು. ಏನುಮಾಡಲಿ. ಮಂತ್ರಿಯಾದರೋ ಇನ್ನೂ ಬರಲಿಲ್ಲ. ನಾನಾದರೋ, ಆತನಿಗೆ ಬರುವೆನೆಂದು ವಾಗ್ದಾನ ಕೊಟ್ಟಿರುವೆನು. ಬಳ್ಳೇದು, ಈ ಮಾರ್ಗವಾಗಿ ನಡೆದು, ಈ ಪಟ್ಟಣದ ದಕ್ಷಿಣಭಾಗದಲ್ಲಿರುವ ಆ ಸ್ಮಶಾನಕ್ಕೆ ಹೋಗಿ ನಿಂತಿರುವೆನು. (ಹೋಗುವನು.)

ಸ್ಥಾನ.೨—ಅರಮನೆಯ ಒಂದು ಕೊಠಡಿಯಲ್ಲಿ ಶುಭಾಂಗಿಯು ತನ್ನ ಸಖಿಯಾದ ಚಂಪಕಮಾಲಿನಿಯೊಡನೆ ಕೂತಿರುವಳು.

ಶುಭಾಂಗಿ. ಸಖಿ, ಇನ್ನೆಷ್ಟು ತಾನೆ ಹೇಳಿಕೊಳ್ಳಲಿ. ನಮ್ಮ ಮಂತ್ರಿಯು ನಿನಗೆ ಅನುರೂಪನಾದ ವರನನ್ನು ನೋಡಿಕೊಂಡು ಬಂದು ಲಗ್ನ ಬೆಳೆಯಿಸಬೇಕೆಂದು ನಮ್ಮ ತಂದೆಯು ಆಜ್ಞೆಯಾಗಿದ್ದರೂ, ಆತನು ಇನ್ನೂ ಬರಲಿಲ್ಲವಲ್ಲ. ಏಕೆಂದರೆ, ಸ್ತ್ರೀಯರಿಗೆ ಯೌವನಪ್ರಾಪ್ತವಾದಾಗ್ಗೆ ಮನೋಧರ್ಮವನ್ನು ಸ್ವೇಚ್ಛಾಮಾರ್ಗಕ್ಕೆ ಬಿಡದೆ, ತಕ್ಕ ಪತಿಯನ್ನು ಹೊಂದಬೇಕಲ್ಲದೆ, ಆತನ ಸೇವಾವೃತ್ತಿಯಲ್ಲಿರುವುದು ಅವರ ಜನ್ಮ ಸಾರ್ಥಕ್ಯವಾದುದು. ಅಲ್ಲದೆ

ಕಂದ॥ ಪತಿಗತಿಹಿತಕಾರ್ಯವಗ್ಗೆ ।
ಯುತಮತಿವಾದಂಗಳಾಡದೌನ್ನತ್ಯದೊಳೀ ॥
ಕ್ಷಿತಿಯೊಳಗನಸೂಯೆಯುವೋಲ್ ।
ಪತಿವ್ರತಾಧರ್ಮದಲ್ಲಿನಡೆವುದುಸಹಜಂ ॥೪೪॥

ಈ ವಿಷಯವನ್ನು ಹೇಗೆತಾನೆ ನಮ್ಮ ತಂದೆಯೊಡನೆ ಹೇಳಿಕೊಳ್ಳಲಿ.

ಚಂಪಕಮಾಲಿನಿ. ರಾಜಕುಮಾರಿಯೇ, ನಿಮ್ಮ ತಂದೆಯು ಅನೇಕ ವೇಳೆ ನಾನಾ ರಾಜರ ಭಾವಚಿತ್ರಗಳನ್ನು ನಿನಗೆ ತಂದು ತೋರಿಸಿದಾಗ್ಗೂ, ಅವರಲ್ಲಿ ಯಾರನ್ನೂ ನೀನು ವರಿಸಲಿಲ್ಲ. ಅವರು ನಿಮ್ಮ ತಂದೆಗಿಂತಲೂ ಐಶ್ವರ್ಯವಂತರಾಗಿರಲಿಲ್ಲವೆ. ಏತಕ್ಕೆ ಅವರಲ್ಲಿ ಯಾರನ್ನಾದರೂ ವರಿಸಬಾರದಾಗಿತ್ತು ?

ಶುಭಾಂಗಿ. ಐಶ್ವರ್ಯವೇ ಹೆಚ್ಚೆಂದು ಭಾವಿಸಿ ಮದುವೆಯಾಗುವ ಹೆಂಗಿಸಿನ ಬುದ್ಧಿಯು ಮಾಂದ್ಯವೇ ಸರಿ. ಗಂಡಸು ಯಾವದರಿಂದ ಶೋಭಿಸುವನು ಹೇಳು ?

ಚಂಪಕಮಾಲಿನಿ. ಒಳ್ಳೇ ರೂಪದಿಂದಲ್ಲವೆ ?

ಶುಂಭಾಂಗಿ. ಒಂದುವೇಳೆ ರೂಪವು ನೇತ್ರಾನಂದಕರವಾಗಿದ್ದರೂ, ಆತನ ದುರ್ದಶೆಯಿಂದ ವಿಕಾರ ರೂಪವುಳ್ಳವನಾದಾಗ್ಗೆ ಏನುಹೇಳುವೆ? ಸೌಂಧರ್ಯಕ್ಕೆ ಮೆಚ್ಚಿ ಮದುವೆಯಾಗುವ ಹೆಂಗಸರು ಹುಚ್ಚರಲ್ಲವೆ ?

ಚಂಪಕಮಾಲಿನಿ. ಹಾಗಾದರೆ, ಸದ್ಗುಣಾಢ್ಯರಿರಲಿಲ್ಲವೆ, ಅವರನ್ನು ಏಕೆ ವರಿಸಬಾರದಾಗಿತ್ತು ?

ಶುಭಾಂಗಿ. ಸ್ವಭಾವವಾಗಿ ಮನುಷ್ಯನಿಗೆ ಹುಟ್ಟುವಾಗಲೇ ಸದ್ಗುಣಗಳಿರುವುವು. ಇವು ಸಂಗದೋಷದಿಂದ ವ್ಯತ್ಯಾಸವಾಗುವುದರಲ್ಲಿ ಸಂಶಯವೇನು? ಆದುದರಿಂದ ಸದ್ಗುಣವೊಂದೇ ಮೋಹಕ್ಕೆ ಕಾರಣವಲ್ಲವೆಂದು ತಿಳಿಯಲಾರೆಯೋ ?

ಚಂಪಕಮಾಲಿನಿ. ಹಾಗಾದರೆ, ಶೌರ್ಯವಂತರಾದ ರಾಜರಲ್ಲಿಯೂ ನಿನ್ನ ಮನಸ್ಸು ಒಡಂಬಡದೆ ಇರುವುದಕ್ಕೆ ಕಾರಣವೇನು ?

ಶುಭಾಂಗಿ. ಈಗಿನ ಕಾಲದ ರಾಜರು ಪರದೇಶಿಯರ ವಶರಾಗಿ ಸ್ವಾತಂತ್ರ್ಯವನ್ನು ಮರೆತು, ತಮ್ಮ ಕರ್ತವ್ಯದಚ್ಯುತಿಯಿಂದ ಪ್ರಜೆಗಳ ಅನುರಾಗವು ತಪ್ಪಿದುದರಿಂದ ಪ್ರಜೆಗಳು ಜೀವನಕ್ಕಿಲ್ಲದೆ ಪೇಚಾಡುತ್ತಿರುವರು. ಆದುದರಿಂದ ಧರ್ಮದಮೇಲೆ ದೃಷ್ಟಿಯಿಡದೆ ಪ್ರಜೆಗಳಿಂದ ಹೇಗೆ ಹಣವನ್ನು ಸುಲಿದುಕೊಳ್ಳಬೇಕು, ಅವರ ಸ್ವಾತಂತ್ರ್ಯವನ್ನು ಹೇಗೆ ಕಮ್ಮಿ ಮಾಡುತ್ತಾ ಬರಬೇಕು, ಇವುಗಳನ್ನು ಯೋಚಿಸುತ್ತಾ ರಾಜ್ಯಾಡಳಿತಗಳಲ್ಲಿಯೇ ಮಗ್ನಮನೋರಥರಾಗಿರುವ ರಾಜ್ಯಾಧಿಪತಿಗಳ ಪಾಡೇನೆಂದು ಹೇಳಲಿ. ಇಂತಹವರಿಗಿಂತಲೂ ನ್ಯಾಯವನ್ನು ಬಿಡದೆ, ಧರ್ಮಾಚರಣೆಯಲ್ಲಿದ್ದು ಬಡವನಾಗಿದ್ದರೂ ಚಿಂತೆಯಿಲ್ಲ; ಅವನೇ ಯೋಗ್ಯನು.

ಚಂಪಕಮಾಲಿನಿ. ಹಾಗಾದರೆ, ಎಂತಹ ಪುರುಷನನ್ನು ವರಿಸಬೇಕೆಂದು ನಿನ್ನ ಅಭಿಪ್ರಾಯವು ?

ಶುಭಾಂಗಿ ಸಖಿ, ಕೇಳು.

ಕಂದ ॥ ಕಲೆಯಿಂಜ್ಞಾನಂವಿನಯಂ ।
ವಿಲಸಿತಚಾತುರ್ಯಕೀರ್ತಿಮುಕ್ತಿಗಳನಿಶಂ ॥
ಫಲಿಸದೆಬಿಡವದರಿಂದಂ ।
ನೆಲನೊಳಸುರಭೂಜದಂತೆ ವಿದ್ಯೆಯದೆಸೆಗುಂ ॥ ೪೫ ॥

ವಿದ್ಯದಿಂದ ವಿವೇಚನಾಶಕ್ತಿಯುಂಟಾಗಿ ಪಾಪ ಪುಣ್ಯಾಭೀತಿಯಾ ಗುವುದರಿಂದ ಆತನಲ್ಲಿ ಮತ್ತಾವ ಸದ್ಗುಣಗಳಿದ್ದಾಗ್ಯೂ ಚಿನ್ನಕ್ಕೆ ವರ್ತಿಕೊಟ್ಟಂತಿರುವುದು. ಆದುದರಿಂದ ವಿದ್ಯವಿಲ್ಲದ ಅನೇಕ ರಾಜರನ್ನೂ ವರಿಸದೆ ನಿರಾಕರಿಸಿರುವುದಕ್ಕೆ ಇದೇಕಾರಣ.

ಚಂಪಕಮಾಲಿನಿ. ಅಂತಹ ವಿದ್ಯಾವಂತನು ಬಂದರೆ ನಿನ್ನನ್ನು ಹರಿಸುವನೋ ಇಲ್ಲವೋ ಎಂಬುವ ಸಂಶಯವು ಮಾತ್ರ ನನಗಿ ರುವುದು.

ಶುಭಾಂಗಿ. ಸಖಿ, ವಿದ್ಯಾವಂತನು ವರಿಸಬೇಕಾಗಿದ್ದರೆ ಪದಾ ರ್ಥದ ಯೋಗ್ಯತಾ ಯೋಗ್ಯತೆಗಳನ್ನು ಪರಿಶೀಲನೆಮಾಡದೆ ವರಿಸು ವನೆಂದು ತಿಳಿದಿರುವೆಯಾ ? ಆದರೆ ಕೇಳು.

ಕಂದ ॥ ಗರಿವೂವಡಗಿರ್ದೊಡಮಾ
ಅರಲುಣಿಗಳ್ಬಿಡದೆಕಮ್ಮೆಲರಿನದನರಿಗುಂ ॥
ನಿರುಕಿಸಿರೂಪವನೊಲವಿಂ
ಪರರಿಂಗಿತವರಿವನಂತಿರಿಳೆಯುಳ್ಳುದುರಂ ।೪೬॥

ಇದೂ ಅಲ್ಲದೆ ತುಂಬಿಯು ತನಗೆ ಎಷ್ಟು ಶ್ರಮವಾದಾಗ್ಯೂ ದೂರ ದಲ್ಲಿರುವ ಕಮಲವನ್ನೇ ಹುಡುಕಿಕೊಂಡು ಬರುವುದಲ್ಲವೆ !

ಚಂಪಕಮಾಲಿನಿ. ಸರ್ವರಿಗೂ ಆನಂದಕರವೆನಿಸಿರುವ ಹಾಲು ಯಾರಿಗೆತಾನೆ ಬೇಡ.

ಶುಂಭಾಂಗಿ. ಹಾಲೇ ಜೀವನಾಧಾರವಾಗಿರುವಾಗ್ಗೆ ಹೇಳತ ಕ್ಕುದೇನಿದೆ ?

ಚಂಪಕಮಾಲಿನಿ. ನೀನು ವಿದ್ಯಾವಂತಳಾದುದರಿಂದ ನಿನಗೆ ಉತ್ತ ರಹೇಳುವುದಕ್ಕಾಗುವುದಿಲ್ಲ.

ಶುಭಾಂಗಿ. ನನ್ನ ಎಡದಹುಬ್ಬು ಹಾರುವುದೇತಕ್ಕೆ ಸಖಿ ?

ಚಂಪಕಮಾಲಿನಿ. ನೀನು ಅನುರೂಪನಾದ ಒಬ್ಬ ವರನನ್ನು ಸೇರುವುದಕ್ಕೆ.

ಶುಭಾಂಗಿ. ನಿನ್ನ ಪರಿಹಾಸ್ಯವು ಸಾಕು.

ಚಂಪಕಮಾಲಿನಿ. ನಿನ್ನ ಸ್ಥಿತಿಯೇ ಪರಿಹಾಸ್ಯಕರವಾಗಿರುವು ದೆಂದು ಹೇಳುವುದಕ್ಕೆ ನೀನು ಮಾಡಿರುವ ಗಂಡಸರ ಗುಣಕಥನವೇ ಗುರುತಲ್ಲವೆ !

ಶುಭಾಂಗಿ. ಸಖಿ. ಇದು ಹಾಗಿರಲಿ, ನಮ್ಮ ತಂದೆಯು ನನಗೆ ತಕ್ಕ ವರನು ದೊರೆಯಲಿಲ್ಲವೆಂದು ಚಿಂತಿಸುತ್ತಿರುವನಲ್ಲ. ಏನು ಮಾಡಲಿ. ಸಖಿ. ಈಗಿನ ಕಾಲದಲ್ಲಿ ನಮಗೇ ಇಷ್ಟು ತೊಂದರೆ ಯಾಗಿರುವಲ್ಲಿ ಬಡವರ ಪಾಡೇನೆಂದು ಹೇಳುವುದಕ್ಕಾದೀತು. ಇದೂ ಅಲ್ಲದೆ ಯುವತಿಯರನ್ನು ಮುದಿಗಂಡನಿಗೆ ಹಣದಾಶೆಗೆ ಕೊಟ್ಟು ಮದುವೆ ಮಾಡಿರುವರಲ್ಲ. ಅಂತಹ ಗಂಡನ ಹತೋಟಿಯು ತಪ್ಪಿ ನಡೆಯುತ್ತಿರುವ ಹೆಂಡರನ್ನು ನೋಡಿ, ನೋಡಿ, ಇನ್ನೂ ಅನೇಕರು ಮದುವೆಯಾಗುವದರಲ್ಲಿ ಇರುವರಲ್ಲ ! ಇವರಿಗೆ ಇನ್ನೂ ನಾಚಿಕೆ ಬೇಡವೆ ! ಅಂತವರ ಜನ್ಮವು ಅತ್ಯಂತ ಹಾಸ್ಯಾಸ್ಪದವೇ ಸರಿ.

ಚಂಪಕಮಾಲಿನಿ ಸಿಜ, ಇಂತಹ ದಂಪತಿಗಳಲ್ಲಿ ಪರಸ್ಪರಾನು ರಾಗವು ತಪ್ಪಿ, ಸಂಸಾರದಲ್ಲಿ ನಿರಾಶರಾಗಿ, ಕಲಹವುಂಟಾಗುತ್ತಿ ರುವ ವ್ಯಾಜ್ಯಗಳು ಸದಾ ನಿಮ್ಮ ತಂದೆಯ ಕೋರ್ಟುಗಳಲ್ಲಿ ಪ್ರತಿ ದಿನವೂ ನಡೆಯುತ್ತಿರುವುದು.

ಶುಭಾಂಗಿ ಇದಕ್ಕೆ ಏನು ಮಾಡಬೇಕೆಂದು ನಿನ್ನ ಅಭಿಪ್ರಾಯವು ?

ಚಂಪಕ. ರಾಜನು ಯೋಗ್ಯನಾದ ಮಂತ್ರಿಶ್ರೇಷ್ಟನಿಂದ, ಈಗಿನ ರಾಜ್ಯದ ಸ್ಥಿತಿಗೆ ಯಾವುದು ಅವಶ್ಯಕವಾಗಿರುವುದೆಂದು ಯೋಚಿಸಿ, ತಕ್ಕ ಕಾರ್ಯಗಳನ್ನು ಮಾಡಬೇಕಲ್ಲದೆ, ಅವರು ಪದವಿಗೆ ಬಂದಾಗ್ಗೆ ಇದೇ ಸಮಯವೆಂದು ದ್ರವ್ಯಾರ್ಜನೆ ಮಾಡಿ, ತಮ್ಮ ಅಧಿಕಾರದಲ್ಲಿ ಬಂಧು ವರ್ಗಗಳಿಗೆ ಮಾತ್ರ ಉಪಪತ್ತಿಗಳನ್ನುಂಟು ಮಾಡಿಕೊಡುತ್ತಿರುವು ದನ್ನು ನೋಡಿದರೆ ಬಹು ಶೋಚನೀಯವಾಗಿದೆ. ರಾಜನಿಗೆ ಪ್ರಜೆಯೇ ಒಂದು ಕಾಮಧೇನು. ಇದಕ್ಕೆ ಉಂಟಾಗಿರುವ ಅವ್ಯವಸ್ಥಿತಿಯನ್ನು ಪರ್ಯಾಲೋಚಿಸಿ, ತಕ್ಕ ಪರಿಹಾರೋಪಾಯಗಳನ್ನು ಹುಡುಕುವುದೇ ರಾಜಧರ್ಮವು. ಪ್ರಜಾಭಿವೃದ್ಧಿಗೆ ಹೆಂಗಸರೇ ಕಾರಣರಾಗಿರುವರು. ಆಂಗ್ಲೇಯರ ಆಚರಣೆಗಳನ್ನು ಅಂತರ್ಯದಲ್ಲಿ ನಡಿಸಬೇಕೆಂಬ ಬುದ್ಧಿಯು ಈಗಿನ ವಿದ್ಯಾವತಿಯರಲ್ಲಿ ಹುಟ್ಟಿರಲು, ಅವರು ತಮ್ಮ ಜಾತಿ ಧರ್ಮವನ್ನು ಬಿಟ್ಟು, ತಮ್ಮ ಕರ್ತವ್ಯವ್ಯಾವದೆಂದು ಯೋಚಿಸದೆ,

ಎಲ್ಲಾ ಮರೆತು ಹೋಗಿರುವುದೇ ಈಗಿನ ಸ್ತ್ರೀಯರ ಅವ್ಯಸ್ಥೆಯೇ ಕಾರಣವಾಗಿದೆ. ಇದು ಹಾಗಿರಲಿ. ಮಂತ್ರಿಯು ಹುಡುಕಿಕೊಂಡು ಬರುವವನೇ ತಕ್ಕವರನಾಗಲೆಂದು ನಿಮ್ಮ ಕುಲದೇವತೆಯಾದ ಕಾಳೀ ದೇವಾಲಯಕ್ಕೆ ಹೋಗಿ ಏಕೆ ಪೂಜಿಸಬಾರದು ?

ಶುಭಾಂಗಿ. ಸಖಿ, ಈಗ ಚೆನ್ನಾಗಿ ಜ್ಞಾಪಿಸಿದೆ. ಇದು ಸಕಾಲವಾದುದರಿಂದ ಪೂಜಾ ಸಾಮಗ್ರಿಗಳನ್ನು ಸಿದ್ಧಗೊಳಿಸು ನಡೆ.

ಚಂಪಕ. ಜಾಗ್ರತೆಯಾಗಿ ದಯಮಾಡಿಸಬೇಕು.

(ಹೋಗುವರು)

---

ಸ್ಥಾನ. ೩. ಸ್ಮಶಾನ. ಕಾಳೀಗುಡಿ.

(ವಸಂತಮಿತ್ರನ ಪ್ರವೇಶ.)

ವಸಂತಮಿತ್ರ ಇದೋ, ಸ್ಮಶಾನವು ಎಂತಹ ಧೀರನಿಗಾದರೂ ಭೀತಿಯನ್ನುಂಟುಮಾಡದೆ ಬಿಡತಕ್ಕುದಾಗಿಲ್ಲ. ಎಲೈ ಜೀವವೆ ? ನಶ್ವರವಾದ ಈ ದೇಹದಲ್ಲಿ ಸೇರಿಕೊಂಡು, ಸೌಖ್ಯವನ್ನೇ ಬಯಸುತ್ತಿರುವ ನೀನು ಈಗ ಭಯದಿಂದ ಬೆದರುವೆಯಾ ? (ಹೆಣಗಳನ್ನು ನೋಡಿ) ಹೆಣಗಳೇ, ನೀವೇ ಧನ್ಯರು, ಧನ್ಯರು. ಹೇಗೆಂದರೆ, ನೀವು ನಿರ್ಜೀವಿಗಳಾಗಿದ್ದರೂ, ನಿಮ್ಮ ಅಂಗಗಳನ್ನು ಈ ನಾಯಿ, ನರಿ ಮುಂತಾದವುಗಳಿಗೆ ಬಹಳ ವಿಶ್ವಾಸದಿಂದ ನೀಡಿ, ತಿಂದು ತೃಪ್ತಿ ಪಡಿಸುತ್ತಿರುವಿರಿ. ನಿಮ್ಮಹಾಗೆ ನಾನೂ ಇದ್ದು, ಜೀವವನ್ನು ಹೊಂದಿದಾಗ್ಯೂ ಇದೋ, ಈ ನನ್ನ ಮಿತ್ರನ ಜೀವವನ್ನು ಕಾಪಾಡದೇ ಇದೇನೆ. ಆದುದರಿಂದ ಈ ನನ್ನ ಜೀವವು ನಿಮ್ಮನ್ನು ನೋಡಲು ಅಂಜುತ್ತಿರುವುದು. ಜನರು ತಮಗೆ ಪ್ರಾಪ್ತವಾಗಿರುವ ಕ್ಷಣಿಕವಾದ ಅಧಿಕಾರದಲ್ಲಿದ್ದಾಗ್ಗೆ, ಬಂದು ಆಶ್ರಯಿಸುವ ಬಡವರ ವಿಷಯದಲ್ಲಿ ತಮ್ಮ ಕೈಲಾದಮಟ್ಟಿಗೂ ಸಹಾಯಮಾಡದೆ ಇರುವ ದೊಡ್ಡ ಮನುಷ್ಯರು ಈ ಹೆಣಗಳಿಗಿಂತಲೂ ನೀಚರಲ್ಲವೇ ! ನನ್ನ ಮಿತ್ರನ ಶವವನ್ನು ತೆಗೆದುಕೊಂಡು ಬಂದು ಬಹಳಕಾಲವಾದಾಗ್ಯೂ ವಿಘ್ನಪರಂಪರೆಗಳಿಂದ ಇನ್ನೂ ಗಂಗಾತೀರಕ್ಕೆ ಸೇರಲೂ ಇಲ್ಲ. (ಅತ್ತಿತ್ತ ನೋಡಿ) ಆಹಾ, ಇಲ್ಲಿ ಒಂದು ಕಾಳೀ ದೇವಾಲಯವಿರುವುದು. ಇಲ್ಲಿ ಈ

ಪೆಟ್ಟಿಗೆಯನ್ನಿಟ್ಟು, ಅತ್ತ ಕಡೆ ಕಾಣಿಸುವ ಈ ಕೊಳದಲ್ಲಿ ಸ್ನಾನಾದಿ ಕರ್ಮಗಳನ್ನು ಮಾಡಿಕೊಂಡು ಬಂದು ಈ ಮಹಾ ದೇವತೆಯನ್ನು ಆರಾಧಿಸುವೆನು. (ಹೋಗುವನು)

ಶುಭಾಂಗಿ, ಪೂಜೋಪಕರಣಗಳೊಡನೆ ಪ್ರವೇಶ.

ಶುಭಾಂಗಿ ಈ ದೇವಾಲಯಕ್ಕೆ ಬರುವ ವೇಳೆಯಲ್ಲಿ ಶುಭಸೂಚಕ ನೆಗಳಾದವು. ಅಲ್ಲದೆ ಮನಸ್ಸಿಗೆ ಏನೋ ಒಂದು ವಿಧವಾದ ಸಂತೋಷವು ಉಂಟಾಗುತ್ತಲಿರುವುದು. ಒಳ್ಳೇದು, ಸಾವಕಾಶ ಮಾಡದೆ ಈ ಕಾಳಿಯನ್ನು ಪೂಜಿಸಿ ಬೇಡಿಕೊಳ್ಳುವೆನು.
(ಎಂದು ಅರ್ಚಿಸಿ)

*ಕಂದ ॥ ಸಾರಸಭವಮುಖ್ಯಾಮರ
ವಾರಸುಸೇವಿತಪದಾಬ್ಜೆಮಂಗಳರೂಪೇ ॥
ಸಾರದಯಾನ್ವಿತಲೋಕಾ
ಧಾರೆಯೆಅನುರೂಪವರನನೀಡೆನಗೀಗಳ್ ॥ ೪೭ ॥

(ಅರ್ಚಿಸುತ್ತಾ ನಿಂತಿರುವಳು)

(ವಸಂತಮಿತ್ರನ ಪ್ರವೇಶ.)

ವಸಂತಮಿತ್ರ. ಇದೇನು, ಇಂತಹ ಘೋರವಾದ ನಿಶಿಯಲ್ಲಿ ಸ್ತ್ರೀಗಾನವು ಕೇಳಬರುವುದು. (ಎಂದು ಮರೆಯಲ್ಲಿ ನೋಡಿ) ಆಹಾ ! ತಿಳಿಯಿತು, ತಿಳಿಯಿತು. ನನ್ನ ಮಿತ್ರನೂ ಇಂತಹ ಮಾಯಾರಾಕ್ಷಸಿಯ ದೆಸೆಯಿಂದಲೇ ಸತ್ತನಲ್ಲವೆ ? ಈಗ ಈಕೆಯ ದೆಸೆಯಿಂದ ಮತ್ತಾರಿಗೆ ಹಾನಿಯುಂಟಾಗುವುದೋ ತಿಳಿಯಲಿಲ್ಲವಲ್ಲ. ಕಾಳಿಯೆ,

---

* ರಾಗ—ತೋಡಿ ರೂಪಕ.

ಪರಿಪಾಲಿಸೆನ್ನಗೌರಿಯೆ । ಗಿರಿಜಾತೆಯೆಸುವಿನೀತೆಯೆ ॥ಪ। ಬಾಲಶಶಿ। ಫಾಲೆನುತ । ಶೂಲೆಕರು । ಣಾಲವಾಲೆ ॥ ಲೋಲಾಂಬಕಿ । ಬಾಲೆಯನು। ಲೀಲೆಯಿನೆ। ಪಾಲಿಪುದು ।೧। ಗೌರೀಕೃಪಾ । ಪೂರೆಭವ। ದೂರೆಪದ। ತೋರೆಭವ ॥ ನೀರೆಸುಖ। ಬೀರೆಗುಣ । ಹಾರೆಗಭೀರೆ ॥೨। ಮಂದಮತಿ। ಯಿಂದೆನಿನ್ನ । ವಂದಿಸದೆ । ಮಂದಳಾದೆ ॥ ವಂದಿಸುವೆ। ಇಂದೆನ್ನಯ । ದಂದುಗವ। ನಂದಿವುದು ॥೩।

ಕಾಪಾಡು. ಒಳ್ಳೇದು ಇವಳು ಏನು ಮಾಡುವಳೋ ಅದನ್ನು ಮರೆ ಯಲ್ಲಿ ನಿಂತು ನೋಡುವೆನು. (ಮರೆಯಲ್ಲಿ ನಿಂತು ನೋಡುತ್ತಿರುವನು.)

ಶುಭಾಂಗಿ. ತಾಯೆ, ನನ್ನ ಮನೋಭಿಪ್ರಾಯವನ್ನು ನೆರವೇರಿಸಿ ಕೊಡದಿದ್ದರೆ, ಈ ನನ್ನ ಕಂಠವನ್ನು ನಿನಗೆ ಇಲ್ಲಿಯೇ ಕತ್ತರಿಸಿ ನಿನ್ನ ಪಾದಾರವಿಂದಕ್ಕೆ ಒಪ್ಪಿಸುವೆನು. (ಎಂದು ಕತ್ತಿಯನ್ನು ಕಂಠಕ್ಕೆ ಸೇರಿಸಿಕೊಳ್ಳುವುದರೊಳಗಾಗಿ)

ಕಾಳಿಯು ಪ್ರತ್ಯಕ್ಷಳಾಗುವಳು.

ಕಾಳಿ. ಬಾಲೆ, ಈ ನಿನ್ನ ಹಠವನ್ನು ಬಿಡು. ನಿನ್ನ ಭಕ್ತಿಗೆ ಮೆಚ್ಚಿದೆನು. ನಿನ್ನ ಮನೋಭಿಃಪ್ರಾಯದಂತೆ ಈ ದಿವಸ ಆ ಪುರು ಷನು ತಾನಾಗಿಯೇ ಈ ಸ್ಮಶಾನಕ್ಕೆ ಬಂದಿರುವನು. ಆತನು ಯತಿ ವೇಷವನ್ನು ಧರಿಸಿರುವನು. ಅವನು ಮಂತ್ರಿಶ್ರೇಷ್ಟನಾಗಿಯೂ, ವಿದ್ಯಾವಂತನಾಗಿಯೂ, ಇರುವನು. ಈ ವಿಷಯವನ್ನು ನಿಮ್ಮ ತಂದೆಗೆ ಹೇಳಿ ನಿನ್ನ ಕೋರಿಕೆಯನ್ನು ನೆರವೇರಿಸಿಕೊ ?

(ಅದೃಶ್ಯಳಾಗುವಳು )

ಶುಭಾಂಗಿ. ತಾಯೆ, ನಿನ್ನಅಪ್ಪಣೆಯಂತೆ ನಡೆದುಕೊಳ್ಳುವೆನು.

(ಹೋಗುವಳು.)

ವಸಂತಮಿತ್ರ. ಇನ್ನೇನುಗತಿ, ನನ್ನ ಪರಮಾಪ್ತನಾದ ಸೌಗಂಧಿ ಕನ ಹೆಂಡತಿಯಾದ ಆನಂದವತಿಯು ಕಟುಕರಿಂದ ತಪ್ಪಿಸಿಕೊಂಡು ಬಂದಿರುವಳೋ ! ಆಕೆಯು ತನ್ನ ಗಂಡನ ಶವವನ್ನು ತೆಗೆದು ಕೊಂಡು ಬಂದೆನೆಂದು ನನ್ನನ್ನು ಹುಡುಕಿಕೊಂಡು ಬಂದು ಈ ಕಾಳಿ ಯನ್ನ, ಬೇಡಿ ನನ್ನನ್ನೂ ತನ್ನಗಂಡನ ಪಾದಾರವಿಂದಕ್ಕೆ ಸೇರಿಸುವು ದಕ್ಕೆ ಬಂದಿರುವಳೋ !! ಆ ನೀಚ ಸ್ತ್ರೀಯು ನನ್ನಮೇಲಣ ಹಠ ವನ್ನುಇನ್ನೂ ಬಿಡಲಿಲ್ಲವಲ್ಲ. ಅಲ್ಲದೆ ಈ .ಕಾಳಿಯು ಈಕೆಯ ಕೃತ್ರಿ ಮವಾದ ಭಕ್ತಿಗೆ ಮೆಚ್ಚಿ, ನಾನೂ ಈ ಸ್ಥಳಕ್ಕೆ ಬಂದಿರುವೆನೆಂದು ಹೇಳಿದಳಲ್ಲ ! ಕಾಳಿಯ ವರವು ಸುಳ್ಳಾಗುವುದೇ ! ಅಯ್ಯೋ, ನಾರಾ ಯಣ, ನಾನಾಗಿಯೇ ಈ ಸ್ಥಳಕ್ಕೆ ಬಂದು ನನ್ನ ಸ್ನೇಹಿತನಂತೆ ದುರ್ಮ ರಣಹೊಂದಬೇಕಾಗಿ ಬಂತೆ. ಒಬ್ಬಳೇ ಇದ್ದಾಗ್ಗೆ ಅವಳನ್ನು ಕತ್ತ

ರಿಸಿ ಹಾಕಬಹುದಾಗಿತ್ತಲ್ಲಾ. ಹೊರಟೇ ಹೋದಳು. ಮುಂದೇನು ಮಾಡಲಿ. ಒಳ್ಳೇದು ಕಾಳಿಯನ್ನು ಕುರಿತು ಪ್ರಾರ್ಥಿಸುವೆನು. (ಸ್ತೋತ್ರ ಮಾಡುವನು.) *

---

ಸ್ಥಾನ ೪—ದರ್ಬಾರು.

(ಸತ್ಯನಿಧಿ, ಸ್ನೇಹಿತ ಕುಳಿತಿರುವರು.)

ಸ್ನೇಹಿತ. ಮಹಾರಾಜನೆ, ತಮ್ಮ ಕುಮಾರಿಗೆ ತಕ್ಕ ವರನು ದೊರೆತನೋ ?

ಸತ್ಯನಿಧಿ. ಸ್ನೇಹಿತನೆ, ಮಕ್ಕಳಿಲ್ಲವೆಂದು ವ್ಯಥೆಪಡುವ ಜನರ ಮೌಢ್ಯವನ್ನೇನೆಂದು ಹೇಳಲಿ. ಗಂಡುಮಕ್ಕಳಾದರೆ ಅವರಿಗೆ ಗುರುಮುಖಾಂತರ ತಕ್ಕಶಿಕ್ಷೆಯನ್ನು ಕೊಡಿಸಿ, ವಿವೇಕವಂತರನ್ನಾಗಿ ಮಾಡದಿದ್ದರೆ ತಂದೆಯು ಜೀವಂತನಾಗಿದ್ದರೂ ಸತ್ತವನಂತೇ ಭಾವಿಸಬೇಕು. ಹೆಣ್ಣುಮಕ್ಕಳಾದರೆ, ಅವರಿಗೆ ಸಕಾಲದಲ್ಲಿ ಯೋಗ್ಯವಾದ ವರನಿಗೆ ಕೊಟ್ಟು ಲಗ್ನಮಾಡಿ, ಸಂಸಾರಧರ್ಮವನ್ನೂ, ಪತಿಶುಶ್ರೂಷಣೆಯನ್ನೂ, ಭಕ್ತಿಯನ್ನೂತಿಳಿಯಿಸಿ ವಿವೇಕವಂತರನ್ನಾಗಿ ಮಾಡದಿದ್ದರೆ ಮಾತಾಪಿತೃಗಳ ಕುಲಗಳಿಗೆ ಅಪಕೀರ್ತಿಯೂ, ವಂಶ ಕ್ಷಯವೂ ಉಂಟಾಗುವುದಲ್ಲದೆ ಆಚಂದ್ರಾರ್ಕವಾಗಿ ಅಪಯಶಸ್ಸೆಂಬ ಲತೆಯು ದುರ್ಜನರ ದುರ್ಬೋಧೆಗಳೆಂಬ ಉದಕದಲ್ಲಿ ಅಭಿವೃದ್ಧಿಯಾಗಿ, ದುರ್ಗುಣಗಳೆಂಬ ಹಣ್ಣುಗಳು ಬಿಡುವುವು. ಆದುದರಿಂದ ನನ್ನ ಮಗಳಿಗೆ ತಕ್ಕ ವರನು ದೇವರು ಯಾವಾಗ ಲಭಿಸುವಂತೆ ಮಾಡುವನೊ, ಅಂದಿಗೆ ನಾನು ಧನ್ಯನಾಗುವೆನು.

---

*ರಾಗ—ಹಿಂದುಸ್ಥಾನಿತೋಡಿ. ಛಾಪು

ಸಾರಸಾರಸಮಾನಲೋಚನೆ ಕಾಂತಿಕಾಂತಿಯುತಾನನೆ । ಭೂರಿಭೂರಿಪ್ರಸಂಘಸಂಹೃತಿಶಕ್ತಿಶಕ್ತಿಸಮನ್ವಿತೆ ॥ಪ॥ ಮಾರಮಾರಣದಕ್ಷದಕ್ಷ ಮದಾಪಹಾಂಕವೆರಾಜಿತೆ ॥ ಧೀರಧೀರತಿಪಾಲಪಾಲನಶೀಲೆ ಪಾಲಿಪುದಂಬಿಕೆ ॥೧॥

ಸ್ನೇಹಿತ. ಸ್ವಾಮಿ, ಪ್ರಪಂಚದಲ್ಲಿರುವ ತಂದೆತಾಯಿಗಳು ತಮ್ಮಂತೆ ವ್ಯಸನಪಡದೆ ಇರತಕ್ಕವರಾರನ್ನೂ ಕಾಣೆ. ಈಗಿನ ಪ್ರಜೆಗಳ ದುರ್ನಡತೆಗಳನ್ನು ಅರಿಕೆ ಮಾಡುವೆನು. ತಾಯಿ ತಂದೆಗಳು ಹಣದಾಶೆಗೆ ಹೆಣ್ಣನ್ನು ಮುದಿ ಗಂಡನಿಗೆ ಕೊಟ್ಟು ವಿವಾಹ ಮಾಡುವರಲ್ಲ. ಏನು ಹೇಳೋಣ. ಆಕೆಯು ವಯೋವಂತಳಾದ ಮೇಲೆ ಆ ಮುದಿಯನ ಹತೋಟಿಯಲ್ಲಿರುವಳೆ? ಈ ಕಲಿಯುಗದಲ್ಲಿ ಮುದುಕರಿಗೆ ಚಾಪಲ್ಯವು ಹೆಚ್ಚು. ಇಂತಹವರೇ ದೊಡ್ಡ ಮನುಷ್ಯರಾದುದರಿಂದ ಗೋಪ್ಯವಾಗಿ ಪರಸ್ಥಳಕ್ಕೆ ಹೋಗಿ ಮದುವೆ ಮಾಡಿಕೊಂಡುತಮ್ಮ ರಾಜ್ಯಕ್ಕೆ ಬಂದು ಸೇರುತ್ತಲಿದಾರೆ. ಇದು ತಮ್ಮ ಚಿತ್ತಕ್ಕೆ ಬರುವ ಹಾಗೆಯೇ ಇಲ್ಲ. ಮದುವೆಯಾದನಂತರ ತಮಗೆ ತಿಳಿದುಬಂದ ಮೇಲೆ ವಿಧಿಸುವ ಜುಲ್ಮಾನೆಯನ್ನು ಕೊಟ್ಟರೆ ಸಾಕಾಗಿರುವುದೆಂದು ಭಾವಿಸಿ ಇದರಿಂದ ತಾವು ತೃಪ್ತಿ ಪಡುವಿರಿ. ಒಂದುವೇಳೆ ಅಂತಹ ಗಂಡ ಹೆಂಡರಲ್ಲಿ ಪರಸ್ಪರಾನುರಾಗವು ತಪ್ಪಿದಾಗ್ಗೆ, ನೀಚರಬೆಂಬಲದಿಂದ ಮುದಿಗಂಡನ ಸಹವಾಸವೇ ಬೇಡವೆಂದು ನ್ಯಾಯಸ್ಥಾನಕ್ಕೆ ಬಂದು ಧೈರ್ಯವಾಗಿ ಹೇಳುತ್ತಿರುವರಲ್ಲ. ಇಂತಹ ನೀಚಸ್ತ್ರೀಯರ ಗುಂಪೇ ಹೆಚ್ಚಾಗಿರುವುದರಿಂದ, ರಾಜ್ಯವು ಹೀನಸ್ಥಿತಿಗೆ ಬಂದು, ಧರ್ಮದೇವತೆಯು ನಿಲ್ಲುವುದಕ್ಕೆ ಸ್ಥಳವಿಲ್ಲದಂತಾಗಿದೆ.

ಸತ್ಯನಿಧಿ. ಸ್ನೇಹಿತನೆ, ನಿನ್ನಮಾತು ಸತ್ಯ. ನನ್ನ ಮಗಳನ್ನು ಬರಮಾಡು. (ಸ್ನೇಹಿತನು ಮಗಳಾದ ಶುಭಾಂಗಿಯನ್ನು ಕರೆದುಕೊಂಡು ಬರುವನು.)

ಕುಮಾರಿಯೇ, ಬಾ. ಹೀಗೆ ಕೂತುಕೋ.

ಶುಭಾಂಗಿ. ಜನಕನೇ, ನನ್ನ ವಯಸ್ಸೆಲ್ಲಾ ತಮ್ಮ ಮನೆಯಲ್ಲಿಯೇ ಕಳೆಯಬೇಕೆಂಬ ಅಭಿಃಪ್ರಾಯವಿದ್ದುದಾದರೆ, ನನ್ನ ಜನ್ಮದ ಸಾರ್ಥಿಕ್ಯವಾವುದೋ ಅದೇಮರೆತಂತೆ ಕಾಣಿಸುವುದು. ನಾನು ತಮ್ಮ ಮನೆಯಲ್ಲಿರುವವರೆಗೂ ತಮ್ಮ ಹೃದಯಕ್ಕೆ ಶೂಲದಂತಿರುವೆನೇ ಹೊರ್ತು ಮತ್ತೆ ಬೇರೆಯಲ್ಲ.

ಸ್ನೇಹಿತ. ಅಮ್ಮ, ಮಂತ್ರಿಯು ನಿನಗೆ ತಕ್ಕ ವರನನ್ನು ಹುಡುಕಿಕೊಂಡು ಬರಲು ಹೋಗಿರುವನು ಆತುರಪಡಲಾಗದು.

ಸತ್ಯನಿಧಿ. (ಮಗಳನ್ನು ನೋಡಿ)

ಕಂದ ॥ ಸಾರಗುಣರೂಪಶೀಲವ
ಯೋರಾಜಿತರಾಜವಂಶತಿಲಕಂಗೀವೆಂ ॥
ನೀರೇಜಾಯತಲೋಚನೆ
ಮಾರಾರಿಯಘಟನಮೆಂತುಟೆಂಬುದನರಿಯೆಂ ॥೪೮॥

ಸತ್ಯನಿಧಿ. ಸ್ನೇಹಿತನೆ, ನಮಗೇ ಇಷ್ಟು ಕಷ್ಟವಾಗಿರುವಾಗ್ಗೆ ಬಡವರ ಪಾಡೇನೆಂದು ಹೇಳುವುದಕ್ಕಾದೀತು.

ಸ್ನೇಹಿತ. ತಾವು ಧರ್ಮಪ್ರಭುಗಳಾದುದರಿಂದ, ಶಾಸ್ತ್ರಸಮ್ಮತವಾಗಿ ನಡೆಯಬೇಕೆಂದು ಪ್ರಯತ್ನಿಸುವಿರಿ. ಬಡವರ ವಿಷಯವನ್ನು ಹೇಳತಕ್ಕುದೇನು; ಕನ್ಯಾ ವಿಕ್ರಯವೇ ಅವರ ಧರ್ಮ.

ಕುಶಲಮತಿಯು ಪ್ರವೇಶ.

ಸತ್ಯನಿಧಿ. ಮಂತ್ರಿಯೆ, ವರಾನ್ವೇಷನಾರ್ಥವಾಗಿ ಹೋಗಿದ್ದ ಕಾರ್ಯವೇನಾಯಿತು?

ಕುಶಲಮತಿ. ತಮ್ಮ ಕುಮಾರಿಗೆ ಅನುರೂಪನಾದವನೊಬ್ಬನನ್ನು ನೋಡಿಕೊಂಡು ಬಂದಿರುವೆನು.

ಸತ್ಯನಿಧಿ. ಆತನು ಈಗ ಎಲ್ಲಿರುವನು !

ಕುಶಲಮತಿ. ಈ ಊರು ಹೊರಗಿರುವ ದಕ್ಷಿಣ ಸ್ಮಶಾನದಲ್ಲಿರುವನು. ಅವನು ಯತಿವೇಷವನ್ನು ಧರಿಸಿರುವನು.

ಶುಭಾಂಗಿ. ತಂದೆಯೆ, ನಿನ್ನೇದಿವಸ ಮಹಾಕಾಳಿಯು ಅಪ್ಪಣೆ ಕೊಡಿಸಿದ ಆ ಮಹಾಪುರುಷನಾಗಿರಬಹುದು. ಆತನಿಗೇ ನನ್ನನ್ನು ಕೊಟ್ಟು ಪಾಣಿಗ್ರಹಣಮಾಡಿಸು.

ಸತ್ಯನಿಧಿ. ಒಳ್ಳೇದು, ನೀನು ಅಂತಃಪುರಕ್ಕೆ ಹೋಗು. ಮುಂದಿನ ಯೋಚನೆಗಳನ್ನು ಮಾಡುವೆನು.

ಶುಭಾಂಗಿ. ಅಪ್ಪಣೆಯಂತೆ ನಡೆಯುವೆನು. [ಹೋಗುವಳು.]

ಸತ್ಯನಿಧಿ. ಮಂತ್ರಿಯೆ, ಆ ಮಹಾಪುರುಷನಿರುವ ಸ್ಥಳಕ್ಕೆ ಹೋಗಿ ಕರೆದುಕೊಂಡು ಬರೋಣವೆ ?

ಕುಶಲಮತಿ. ಅಪ್ಪಣೆ ದಯಮಾಡಿಸಬಹುದು.

(ಇಬ್ಬರೂ ಹೋಗುವರು.)

---

ಸ್ಥಾನ ೫—ಸ್ಮಶಾನ.

ವಸಂತಮಿತ್ರ. ಮಂತ್ರಿಯು ಹೇಳಿ ಹೋದವನು ಇನ್ನೂ ಬರಲಿಲ್ಲವಲ್ಲ. ನಾನು ಬರುವೆನೆಂದು ಆತನಿಗೆ ವಾಗ್ದಾನ ಮಾಡಿರುವೆನು. ಏನುಮಾಡಲಿ, ಹೊತ್ತಾಯಿತು. ಮಿತ್ರನ ವಿಯೋಗವೇ ನನ್ನನ್ನು ಇಷ್ಟು ತೊಂದರೆಗೊಳಿಸುತ್ತಿರುವುದು. ಏಕೆಂದರೆ,

ಕಂದ॥ ಪೋಷಿಪೊಡೆಮಾತೆತನುವಂ
ಭೂಷಣಮೆನಿಸುತ್ತೆ ಪೊರೆವೊಡುರುವಿದ್ಯೆಮಹಾ।
ತೋಷಂಗೊಳಿಪೊಡೆಸತಿತಾಂ
ಶೋಷಿಸುವೊಡೆದುಃಖಮಿಳೆಯೊಳಪ್ರತಿಮಂಗಳ್ ॥೪೯॥

(ಸತ್ಯನಿಧಿ ಕುಶಲಮತಿ ಪ್ರವೇಶಿಸುವರು.)

ಸತ್ಯನಿಧಿ. ಮಂತ್ರಿಯೆ, ನೀನು ಹೇಳಿದ ಮಹಾಪುರುಷನೆಲ್ಲಿರುವನು ?

ಕುಶಲಮತಿ. ಇದೋ ಇಲ್ಲಿಯೆ ನಿಂತಿರುವನು. (ತೋರಿಸುವನು. ಯತಿಯನ್ನು ನೋಡಿ) ಆರ್ಯರೆ, ತಮ್ಮ ಕೆಲಸಕ್ಕೋಸ್ಕರವೇ ನಮ್ಮ ಮಹಾರಾಜನನ್ನು ಕರೆತಂದಿರುವೆನು. ಇವರೇ ನಮ್ಮ ಮಹಾರಾಜರು.

(ತೋರಿಸುವನು.)

ಸತ್ಯನಿಧಿ. ಮಹಾಪುರುಷರೆ, ನನ್ನದೊಂದು ವಿಜ್ಞಾಪನೆ ಇರುವುದು.

ವಸಂತಮಿತ್ರ. ಏನು, ಹೇಳಬಹುದು. ಯೋಗ್ಯವಾದುದಾಗಿದ್ದರೆ ಯೋಚಿಸಬಹುದಾಗಿರುವುದು.

ಸತ್ಯನಿಧಿ. ಕಾಳೀ ವರದಿಂದ ನನಗೆ ಲಬ್ಧವಾದ ಒಂದು ಕನ್ಯಾರತ್ನವಿರುವುದು. ಆ ನನ್ನ ಕುಮಾರಿಗೆ ವಿವಾಹ ಮಾಡಬೇಕೆಂದು ನಾನಾ

ರಾಜೋತ್ಪನ್ನರಲ್ಲಿ ಹುಡುಕಿದಾಗ್ಯೂ, ಯಾರನ್ನೂ ವರಿಸದೆ ಈಗ ತಮ್ಮನ್ನೇ ವರಿಸಿರುವೆನೆಂದು ಹೇಳಿರುವಳು. ತಾವು ಇಲ್ಲಿರುವರೆಂಬ ವರ್ತಮಾನವನ್ನು ತಿಳಿದು, ತಮ್ಮ ದರ್ಶನಕ್ಕೆ ಬಂದಿರುವೆನು. ತಾವು ನನ್ನ ಸುಕುಮಾರಿಯನ್ನು ಸ್ವೀಕರಿಸಿ, ನನ್ನನ್ನು ಕೃತಾರ್ಥನನ್ನಾಗಿ ಮಾಡಬೇಕೆಂದು ಬೇಡಿಕೊಳ್ಳುವೆನು.

ವಸಂತಮಿತ್ರ. ನಿಮ್ಮ ವಿಜ್ಞಾಪನೆಗಳು ನಿರರ್ಥಕವು. ಹೇಗೆಂದರೆ, ಯತ್ಯಾಶ್ರಮದಲ್ಲಿರುವವರಿಗೆ ವಿವಾಹವೆನ್ನುವುದು ಯಾವ ಶ್ರುತಿಯಲ್ಲಿ ಹೇಳಿದೆ ? ಒಂದುವೇಳೆ ಆಕೆಯು ನನ್ನನ್ನು ವರಿಸಿ ಯಾವಪ್ರಯೋಜನವನ್ನು ಪಡೆವಾಳು? ರಾಜಧರ್ಮಕ್ಕೆ ವ್ಯತಿರಿಕ್ತವಾಗಿ ಯತಿಗೆ ವಿವಾಹ ಮಾಡುವೆನೆಂದು ಹೇಳುವ ದುರ್ಬೋಧನೆಯಿಂದ, ನಿನ್ನ ಧರ್ಮಗಳು ಅಸ್ತೋತ್ರಾರ್ಹವಾದವುಗಳು. ರಾಜನೆ, ಕೇಳು; ಸ್ತ್ರೀಯರು ಅತಿ ಮಾಯಾವಿಗಳು; ಎಂತಹ ಪಾಪ ಕೃತ್ಯಗಳನ್ನು ಮಾಡುವುದಕ್ಕೂ ಹೇಸತಕ್ಕವರಾಗಿಲ್ಲ. ಇದರಿಂದ ಇಹ ಸುಖವನ್ನೇ ತ್ಯಜಿಸಿರುವ ನನಗೆ ಪುನಃ ಸಂಸಾರ ಬಂಧನವೆಂದರೇನು ? ಈ ಯೋಚನೆಯನ್ನು ಬಿಡು.

ಸತ್ಯನಿಧಿ. ಕಾಡಿನಲ್ಲಿ ಸ್ವೇಚ್ಛೆಯಾಗಿ ಬೆಳೆದ ಆನೆಯನ್ನು ತಂದು ನಮ್ಮ ಯುಕ್ತಿಗಳಿಂದ ನಾವು ಹೇಳಿದಂತೆ ಕೇಳುವಹಾಗೆ ಮಾಡಿಕೊಳ್ಳಬಹುದಾಗಿರುವಾಗ್ಗೆ, ವಿವೇಕವಂತರಾದ ಸ್ತ್ರೀಯರನ್ನು ನಮ್ಮ ಹತೋಟಿಯಲ್ಲಿಟ್ಟುಕೊಳ್ಳದಿದ್ದರೆ ಸ್ತ್ರೀಯರ ತಪ್ಪೇನಿರುವುದು ? ತಮ್ಮ ಅನುಭವಕ್ಕೆ ತಂದವಳನ್ನೇ ಉದ್ದೇಶಿಸಿ, ಲೋಕದಲ್ಲಿರುವ ಹಸುವು ಕೊಡುವ ಹಾಲಿನಲ್ಲೆಲ್ಲಾ ಒಂದೇಗುಣವಿರುವುದೆಂದು ಹೇಳುವ ನ್ಯಾಯಕ್ಕೆ ಪ್ರತಿ ಹೇಳಲು ಆಶ್ರಮಕ್ಕೆ ಹೆದರಿ ಸುಮ್ಮನಿರಬೇಕಾಗಿದೆ. ಶಿಕ್ಷೆಯಲ್ಲಿರುವವರೂ ಕೂಡ ಕೆಡುವುದಾಗಿದ್ದರೆ, ಪ್ರಪಂಚದಲ್ಲಿ ಒಳ್ಳೇದು ಕೆಟ್ಟದ್ದು ಎಂಬ ಪದಾರ್ಥವೇ ಸಿಕ್ಕುವುದು ದುರ್ಲಭವು.

ಕುಶಲಮತಿ. ಸ್ವಾಮಿ, ಇದುಹಾಗಿರಲಿ. ಈ ಆಶ್ರಮವನ್ನು ಧರಿಸಿರುವುದಕ್ಕೆ ಕಾರಣವೇನು ?

ವಸಂತಮಿತ್ರ. ಇಹಸುಖವು ನೀರಸವೆಂದು ತಿಳಿದು ಇಂದ್ರಿಯ ವ್ಯಾಪಾರಗಳಲ್ಲಿ ವಿಮುಖನಾಗಿ, ನಿಶ್ಚಂಚಲಚಿತ್ತನಾಗಿರಲು ಈ ಆಶ್ರಮವನ್ನು ತಾಳಿರುವೆನು.

ಕುಶಲಮತಿ. ನಿಶ್ಚಂಚಲಮನಸ್ಸುಳ್ಳವರಾಗಿದ್ದರೆ, ತಾವು ಭ್ರಾಂತಿಯಿಂದ ಹೀಗೆ ತಿರುಗುತ್ತಿರುವುದಕ್ಕೆ ಕಾರಣವೇನು?

ವಸಂತಮಿತ್ರ. ಯತಿಗೆ ವಿವಾಹ ಮಾಡಬೇಕೆಂಬ ದುರ್ಬೋಧನೆಯು ನಿಮ್ಮ ಮಹಾರಾಜನಿಗೆ ಹುಟ್ಟಿರುವಾಗ್ಗೆ, ಇನ್ನು ನಮ್ಮ ಕರ್ಮಗಳನ್ನು ನಡೆಸಿಕೊಳ್ಳುವುದು ದುರ್ಲಭವೆಂದು ತಿಳಿದು, ಪರರಾಜ್ಯಕ್ಕೆ ಹೋಗಬೇಕೆಂದು ಹೀಗೆ ಹೊರಟಿರುವೆನು.

ಕುಶಲಮತಿ. ಸ್ವಾಮಿ, ಇದುಹಾಗಿರಲಿ. ತಮ್ಮ ಅಂತರಂಗದ ಜ್ಞಾನವೆಲ್ಲಾ ತಾವು ಈ ಪೆಟ್ಟಿಗೆಯನ್ನು ನೋಡಿ ಹಂಬಲಿಸಿದಾಗಲೇ ಗೊತ್ತಾಯಿತು. (ರಾಜನನ್ನು ನೋಡಿ) ಸ್ವಾಮಿ, ತಾವು ದಯಮಾಡಿಸಬಹುದು. ತಮ್ಮ ಕಾರ್ಯವನ್ನು ನಾನು ನೆರವೇರಿಸುವೆನು.

ಸತ್ಯನಿಧಿ. ಪೂಜ್ಯರೇ ಹೋಗುವೆನು. (ನಮಸ್ಕರಿಸುವನು)

ವಸಂತಮಿತ್ರ ಹೋಗಿಬಾ.

ಕಂದ॥ ಜನಮುಂನಯಮುಂ ಘನತೆಯು
ಮಿನಿತುಂರತ್ನಂಗಳೆಂದುಭಾವಿಸಿಸತತಂ ॥
ಅನುರಾಗದಿಂದಲಾರ್ಜಿಸಿ
ವಿನತಾಮರಭೂಜದಂತೆರಾಜಿಸುಮಹಿಪಾ ॥೫೦॥

(ಸತ್ಯನಿಧಿಯು ಹೋಗುವನು.)

ಕುಶಲಮತಿ (ಯತಿಯನ್ನು ನೋಡಿ) ಸ್ವಾಮಿ, ನಮ್ಮ ಮಹಾರಾಜನು ತುಂಬಾ ಕೋಪಿಷ್ಠನು. ಆತನ ಮನೋಗತದಂತೆ ನಡೆಯದಿದ್ದರೆ, ತಮ್ಮ ಪ್ರಕೃತೋಚಿತ ಕಾರ್ಯಗಳಿಗೆ ಭಂಗವುಂಟಾಗದಿರದು. ಇದರಮೇಲೆ ತಮ್ಮ ಚಿತ್ತ.

ವಸಂತಮಿತ್ರ. (ಸ್ವಗತಃ) ಈಗದ್ವಂದ್ವ ಸಂಕಟವಾಗಿರುವದಲ್ಲ. ಏನು ಮಾಡಲಿ. ನನ್ನ ಮನೋರಥವನ್ನು ನೆರವೇರಿಸಿಕೊಳ್ಳುವುದಕ್ಕೆ ಹೇಗೆ.

(ಯೋಚಿಸಿ) ಮಂತ್ರಿಯೆ, ನಿನ್ನೆ ರಾತ್ರಿ ಒಬ್ಬ ಕನ್ನಿಕೆಯು ಈ ಸ್ಮಶಾನದಲ್ಲಿರುವ ಕಾಳೀ ದೇವಾಲಯಕ್ಕೆ ಬಂದಿದ್ದಳಲ್ಲ. ಆಕೆಯಾರು, ಹೇಳಬಲ್ಲೆಯಾ?

ಕುಶಲಮತಿ. ಅಕೆಯೇ ನಮ್ಮ ಮಹಾರಾಜನ ಮಗಳು.

ವಸಂತಮಿತ್ರ. ಇನ್ನು ನೀನು ಹೋಗಿ ವಿವಾಹಕ್ಕೆ ತಕ್ಕ ಕಾರ್ಯಗಳನ್ನು ಸಿದ್ಧಗೊಳಿಸಬಹುದು; ನಾನು ಖಂಡಿತವಾಗಿಯೂ ವಿವಾಹಕ್ಕೆ ಒಪ್ಪಿರುವೆನು. ನಡೆ. (ಮಂತ್ರಿಯು ಹೋಗುವನು. ಸಭೆಯ ಕಡೆಗೆ ತಿರುಗಿ) ಆಹಾ! ಎಂತಹ ಮೋಸವಾಗುತ್ತಿತ್ತು. ಸ್ಮಶಾನದಲ್ಲಿ ಕಂಡ ಸ್ತ್ರೀಯನ್ನು ಆ ನೀಚಳಾದ ಆನಂದವತಿಯೆಂದು ಭ್ರಾಂತಿ ಪಟ್ಟೆನಲ್ಲ! ಆಕೆಯ ಭಕ್ತಿಗೆ ಕಾಳಿಯು ಪ್ರತ್ಯಕ್ಷಳಾಗಿರುವುದರಿಂದ ಆ ಯುವತಿಯು ಯೋಗ್ಯಳೇ ಸರಿ. ಈಗ ಒಂದು ಯೋಚನೆಯು ಮನಸ್ಸಿಗೆ ಹೊಳೆಯಿತು. ಏನೆಂದರೆ, ಆಕೆಯನ್ನು ನಾನು ಮದುವೆ ಮಾಡಿಕೊಂಡು, ಆಕೆಯಿಂದಲೇ ನನ್ನ ಮಿತ್ರನನ್ನು ಬದುಕಿಸಿಕೊಳ್ಳಬಹುದಲ್ಲವೆ! ದೇವರು ನನಗೆ ಈಗ ಸರಿಯಾದ ಮಾರ್ಗವನ್ನು ತೋರಿಸಿದನು. ಜಾಗ್ರತೆಯಾಗಿ ಹೋಗಿ ವಿವಾಹವನ್ನು ಮಾಡಿಕೊಳ್ಳುವೆನು. (ಹೋಗುವನು.)

(ಕರ್ಪೂರಮಂಜರಿ, ಕಲವಾಣಿಯರ ಪ್ರವೇಶ.)

ಕರ್ಪೂರಮಂಜರಿ. ಸಖಿ, ಎಲ್ಲಿಗೆ ಹೋಗುತ್ತಿರುವೆ?

ಕಲವಾಣಿ. ನಮ್ಮ ಮಹಾರಾಜನ ಮಗಳನ್ನು ಒಬ್ಬ ಯತಿಗೆ ಕೊಟ್ಟು ವಿವಾಹವಾಗುವುದೆಂದು ಕೇಳಿದೆ. ಈ ಲೋಕಾಶ್ಚರ್ಯಕರವಾದ ಮಹೋತ್ಸವವನ್ನು ನೋಡಲು ಹೋಗುತ್ತಿರುವೆನು.

ಕರ್ಪೂರಮಂಜರಿ. ಯತಿಗೆ ವಿವಾಹವೆಂದರೇನು? ರಾಜನಮಗಳನ್ನು ಯತಿಗೆ ಕೊಡುವುದೆಂದರೇನು; ನಿಜವಾಗಿಯೂ ಹೇಳು.

ಕಲವಾಣಿ. ಪೂರ್ವದಲ್ಲಿ ಯತಿಯಾದ ಅರ್ಜುನನಿಗೆ, ರಾಜಕನ್ಯೆಯಾದ ಸುಭದ್ರೆಯನ್ನು ಕೊಟ್ಟು ವಿವಾಹವಾಗಲಿಲ್ಲವೆ? ಹಾಗೆಯೇ ಈಗಲೂ ಎಂದು ತಿಳಿ.

ಕರ್ಪೂರಮಂಜರಿ. ಸಖಿ, ನಿಜ. ಯತಿಯು ವಿವಾಹಕ್ಕೆ ಒಪ್ಪಿ ಬಂದಿರುವುದೂ, ಆಕೆಯೂ ಈತನನ್ನೇ ಮದುವೆ ಮಾಡಿಕೊಳ್ಳ ಬೇಕೆಂದು ಹಠ ಹಿಡಿದಿರುವುದೂ ಇವುಗಳನ್ನು ಪರ್ಯಾಲೋಚಿಸಿದು ದಾದರೆ ಏನೋ ಕಾರ್ಯಾಕಾರಣವಿರಬಹುದು.

ಕಲವಾಣಿ ಅಂತಃಪುರದ ಸ್ತ್ರೀಯರ ವಿಚಾರವು ಯಾರಿಗೆತಾನೆ ತಿಳಿಯುವುದು. ಮಗಳ ಮನೋಗತಕ್ಕೆ ರಾಜನೂ ಒಪ್ಪಿದಬೇಕಾ ದರೆ ಇದರ ಆಂತರ್ಯವು ನಮ್ಮಿಂದ ತಿಳಿಯುವುದು ಸಾಧ್ಯವೆ ? ವಿವೇಕಶಾಲಿಯಾದ ರಾಜನು ಯೋಚನೆ ಮಾಡದೆ ಯಾವ ಕೆಲಸ ವನ್ನೂ ಮಾಡುವುದಿಲ್ಲ. ನೀನು ಯಾಕೆ ಇಷ್ಟು ವೇಚಾಡುವೆ.

ಕರ್ಪೂರಮಂಜರಿ. ಗೆಳತಿ, ಕೇಳು. ಹೆಣ್ಣನ್ನು ಕೊಡಬೇಕಾಗಿ ದ್ದರೆ, ಅಳಿಯನು ವಿದ್ಯಾವಂತನಾಗಿದ್ದರೆ ಸಾಕೆಂದು ಮಾವನು ಯೋಚಿಸುವನು. ಅತ್ತೆಯು ಹಣವಂತನಾಗಿದ್ದರೆ ಸಾಕೆಂತಲೂ, ಬಂಧುಗಳು ಸತ್ಕುಲಪ್ರಸೂತನಾಗಿರಬೇಕೆಂತಲೂ ಯೋಚಿಸು ವರು. ಇತರರಾದ ನಾವು ಮೃಷ್ಟಾನ್ನ ಭೋಜನವು ಸಿಕ್ಕಿದರೆ ಸಾಕೆಂದು ಯೋಚಿಸುತ್ತಿರುವಲ್ಲಿ ಮಿಕ್ಕ ವಿಷಯಗಳು ನಮಗೇಕೆ ?

ಕಲವಾಣಿ. ಸಖಿ, ಇಂತಹ ಮದುವೆಯ ಲಕ್ಷಣವನ್ನು ನೋಡೋಣ ಬಾ. (ಇಬ್ಬರೂ ಹೋಗುವರು. )

(ತೆರೆಯಲ್ಲಿ ವಿವಾಹವು ನೆರವೇರುವದು ಮಂಗಳವಾದ್ಯಗಳು ಮೊಳಗುತ್ತಿರುವುವು .)

ಸ್ಥಾನ — ಅರಮನೆಯ ಶೈಯಾಗೃಹ.

(ವಸಂತಮಿತ್ರನೂ ಶುಭಾಂಗಿಯು ಕುಳುತಿರುವರು )

ಶುಭಾಂಗಿ. * ಪ್ರಿಯನೆ,

ಕಂದ॥ ಇನಿಯನೆನುಡಿಸೊದೆಯಂಗರೆ
ದನುತಾಪದೆತಪಿಸಿಕಂದಿದೀಕಾಯಕೆನೀಂ ॥
ಘನರಾಗದೆಗಾಢಾಲಿಂ
ಗನಸುಖಮಂಸಾರ್ಚುಕೇಣಮಂತೊರೆದೀಗಳ್ ॥೫೭॥

---

ರಾಗ. ತಾಳ

* ಇನಿಯನೆ ಏಕೆಚಿಂತಿಸೆ । ಪೇಳ್ ॥ ಪ ॥ ಅರಸನೀನೆನ್ನೊಳು । ಹರು ಷದಿ ಕೂಡುತ । ಸರಸದೊಳಾಡದೆ ಈಪರಿ ॥ ವಿರಸವೇಕೆನ್ನೊಳು । ಎರಗುವೆ

ನಮ್ಮ ತಂದೆಯು ಇದುವರೆಗೂ ನನ್ನನ್ನು ಯಾರಿಗೂ ಕೊಡದೆ ತಮ್ಮಂತಹವರ ಪಾದಸೇವೆಯು ಸಿಕ್ಕಿದುದರಿಂದ ಇಂದಿಗೆ ನನ್ನ ಜನ್ಮವು ಸಫಲವಾಯಿತು. ಹೀಗಿರಲು, ತಮ್ಮ ಸೇವೆಯಲ್ಲಿಯೇ ನಿರತಳಾದ ನನ್ನನ್ನು ಕಾಪಾಡಿಕೊಂಡು ಬರಬೇಕೆಂದು ಬೇಡಿಕೊಳ್ಳುವೆನು.

ವಸಂತಮಿತ್ರ. ಮಾತನಾಡಿಸಿ ತೊಂದರೆ ಮಾಡಬೇಡ.

ಶುಭಾಂಗಿ. ಪ್ರಿಯನೆ, ಇದೇನು ನನ್ನಮೇಲೆ ಕೋಪವೆ, ಕಾರಣ ವೇನು? ಅಂತಹ ಅಪರಾಧವಾವುದನ್ನೂ ಮಾಡಲಿಲ್ಲವಲ್ಲ.

ವಸಂತಮಿತ್ರ. ನೀನು ನನ್ನ ಮನಸ್ಸನ್ನು ಅಪಹಾರ ಮಾಡಿದ ಅಪರಾಧಕ್ಕಿಂತ ಬೇರೆ ಅಪರಾಧವಾವುದು?

ಶುಭಾಂಗಿ. ನಿನ್ನ ಮನಸ್ಸನ್ನು ಅಪಹಾರ ಮಾಡಿದ ದೋಷವು ಕಾಯಜಾತನದೇ ಹೊರ್ತು ನನ್ನದಲ್ಲವಲ್ಲ. ಕದ್ದ ಕಳ್ಳನಿಗೆ ಶಿಕ್ಷೆಮಾಡದೆ ನನ್ನನ್ನು ಹಿಂಸಿಸುವುದು ಉಚಿತವೆ? ತಾವು ಇಂಗಿತಜ್ಞರೋ, ಅಲ್ಲವೋ, ಎಂಬುದನ್ನು ಯೋಚಿಸತಕ್ಕದಾಗಿದೆ.

ವಸಂತಮಿತ್ರ. ಅಗೋಚರನಾದ ಕಳ್ಳನನ್ನು ಶಿಕ್ಷೆಮಾಡೆಂದು ಹೇಳುವ ನಿನ್ನ ಬುದ್ಧಿಯು ಸ್ತೋತ್ರಾರ್ಹವಾದುದೇ ಸರಿ. ನೀನು ಹೇಳಿದ ಕಳ್ಳನಿಗೆ ನನ್ನ ಮೌನವೆಂಬ ನಿಗಳವನ್ನು ಈಗ ತೊಡಿಸಿರುವಾಗ್ಗೆ ಅದನ್ನು ಬಿಚ್ಚಲು ಏಕೆ ಪ್ರಯತ್ನಪಡುತ್ತಿರುವೆ? ನೀನು ಸುಮ್ಮನಿರು.

ಶುಭಾಂಗಿ. ಕಳ್ಳನಿಗೆ ತೊಡಿಸಿರುವ ನಿಗಳವು ಅವನಿಗೆಮಾತ್ರ ತೊಂದರೆಯನ್ನುಂಟುಮಾಡದೆ ನನಗೂ ಬಾಧೆಯುಂಟುಮಾಡಿರುವುದೇಕೆ? ಈ ನ್ಯಾಯವು ನಿನಗೆ ಸಲ್ಲತಕ್ಕುದೇ?

ವಸಂತಮಿತ್ರ ನೀನು ನ್ಯಾಯವಿಚಾರ ಪರಳಾಗಿದ್ದರೆ ನನ್ನ

---

ಪಾದಕೆ। ಬರಿದೆಕಾಲವೇಕೆನೂಕುವೆ ಹಾ ॥೧॥ ಅರಸಿನಿನ್ನೀಪರಿ। ವರಿಸುತೆ ಮೋಹದಿ। ಕರೆಕರೆಗೈಯುದೆಪಾಲಿಸು॥ ನಿರುತಪುಷ್ಪಶರ। ನುರುಬೆಯುತಾಳೆನು। ಭರದಿತೋರುಕಾಮುಕೇಳಿಯ ॥೨॥

ಮನೋವ್ಯಾಕುಲಕ್ಕೆ ಕಾರಣವೇನೆಂತಲೂ, ಅದನ್ನು ಪರಿಹರಿಸುವ ಮಾರ್ಗವಾವುದೆಂತಲೂ ಯೋಚಿಸುತ್ತಿದ್ದೆ. ಅದನ್ನುಬಿಟ್ಟು ಸ್ವಾರ್ಥಾಪೇಕ್ಷೆಯಲ್ಲಿಯೇನಿರತಳಾದ ನಿನ್ನೊಡನೆ ಮಾತನಾಡಿ ಫಲವೇನು, ವಿವೇಕನೆಯಿಲ್ಲದವರ ಸಹವಾಸವು ಹೀಗೆಯೆ !

ಶುಭಾಂಗಿ. ಯೋಗ್ಯತಾನುಸಾರವಾಗಿ ಮೃಗಗಳೂ ತಮಗೆ ಬೇಕಾದ ವಸ್ತುವನ್ನೇ ತಿಂದು ಸಂತೋಷಪಡುತ್ತಿರುವಾಗ್ಗ, ಈ ಸಂದರ್ಭದಲ್ಲಿ ತಮ್ಮ ವಿಷಯವನ್ನು......ನಾನೇಕೆ ಹೇಳಬೇಕು ಪ್ರಯೋಜನವಿಲ್ಲ.

ವಸಂತಮಿತ್ರ, ನನಗೆ ವಿವೇಕವಿಲ್ಲವೆಂದು ಹೇಳಿದೆಯಲ್ಲವೆ. ಕೇಳು ನಿನ್ನ ವಿವೇಕವು ಪರಪುರುಷನಲ್ಲಿರುವುದೆಂದು ನಿನಗೆ ತಿಳಿಯಲಿಲ್ಲವೆ ?

ಶುಭಾಂಗಿ. ಪುರುಷರು ಪುರುಷರನ್ನು ವರಿಸುವುದು ಸ್ತ್ರೀಯರು ಸ್ತ್ರೀಯರನ್ನು ವರಿಸುವುದು ಯುಕ್ತವೆಂದು ಹೇಳುವ ಶ್ಲಾಘ್ಯವಾದ ನ್ಯಾಯ ವಿಚಕ್ಷಣೆಯಿಂದ ತಾವು ಈ ಸನ್ಯಾಸಾಶ್ರಮವನ್ನು ಧರಿಸಿ ನನ್ನನ್ನು ಮದುವೆಯಾದುದು ಸಾರ್ಥಕವಾದಂತಾಯಿತು. ಪ್ರಿಯನೆ, ಹಾಗಾದರೆ ಪರಸ್ತ್ರೀಯಲ್ಲಿ ನನ್ನ ಮನಸ್ಸು ಇರುವುದೆಂದು ಹೇಳಿದರೆ ನನ್ನನ್ನು ವಿವೇಕಿಯೆಂದು ಯಾರುತಾನೆ ಹೇಳುವರು ?

ವಸಂತಮಿತ್ರ. ನಿನ್ನ ಯೋಗ್ಯತೆಯು ಆ ಸ್ಮಶಾನದಲ್ಲಿದ್ದಾಗ್ಗ ಪರಸ್ತ್ರೀಯಾದ ಆ ಕಾಳಿಯಲ್ಲಿ ನಿನ್ನ ವಿವೇಕದಿಂದ ವರವನ್ನು ಪಡೆದುದು ತಿಳಿಯಿತು. ಪರಸ್ತ್ರೀಯಲ್ಲಿ ನೀನು ಇಟ್ಟಿರುವ ವಿವೇಕವು ಇದು.

ಶುಭಾಂಗಿ. ನಿಜ, ಕಾಳಿಯಲ್ಲಿ ನಿಶ್ಚಂಚಲವಾದ ವಿವೇಕವನ್ನಿಟ್ಟು ವರವನ್ನು ಪಡೆದು ನಿನ್ನನ್ನು ವರಿಸಿ ಮದುವೆಯಾದೆನಲ್ಲವೆ ? ಒಳ್ಳೇದು, ನೀನು ಪರಪುರುಷನಲ್ಲಿ ನೀನಿಟ್ಟಿರುವ ವಿವೇಕವು ಹೇಗೆ ತೋರಿಸು ?

ವಸಂತಮಿತ್ರ, (ಹತ್ತಿರಿದ್ದ ಪೆಟ್ಟಿಗೆಯನ್ನು ತೆರೆದು)ಇದೋ, ಈ ಪುರುಷನಲ್ಲಿ ನನ್ನ ಮನಸ್ಸು ಇರುವುದು ನೋಡು.

ಶುಭಾಂಗಿ. (ಎದ್ದು)ಇದೇನು, ನನ್ನಪತಿಯು ಪೆಟ್ಟಿಗೆಯಲ್ಲಿ ಹಣವನ್ನು ತುಂಬಿ ತಂದಿರುವನು ! ಇದೇನು ಹುಚ್ಚು. ಜನರು ಹಣವನ್ನು

ತುಂಬಿ ತಿರುಗುವವನೂ ಉಂಟೆ! (ಪತಿಯನ್ನು ನೋಡಿ) ಪ್ರಿಯನೆ, ಈತನು ಸತ್ತಿರುವುದೇನು ? ಶವವನ್ನು ಹೊತ್ತುಕೊಂಡು ಹೀಗೆ ಬಂದಿರುವುದೇನು ? ಈತನಾರು ?

ವಸಂತಮಿತ್ರ. ಪ್ರಿಯೆ, ಈತನು ನನ್ನ ಪರಮ ಮಿತ್ರನು. ಕಾರಣಾಂತರದಿಂದ ಈತನಿಗೆ ದುರ್ಮರಣ ಪ್ರಾಪ್ತವಾಗಿರುವುದರಿಂದ, ಶವವನ್ನು ಗಂಗಾತೀರಕ್ಕೆ ತೆಗೆದುಕೊಂಡುಹೋಗಿ, ಉತ್ತರಕ್ರಿಯಾದಿಗಳನ್ನು ಮಾಡುವುದಕ್ಕೆ ಹೊತ್ತುಕೊಂಡು ಬಂದಿರುವೆನು. ನೀನು ಆ ಸ್ಮಶಾನದಲ್ಲಿ ಬಂದಿದ್ದಾಗ್ಗೆ ನಿನಗೆ ದೇವಿಯು ಪ್ರತ್ಯಕ್ಷವಾದುದನ್ನು ನೋಡಿ, ನಿನ್ನನ್ನು ಮದುವೆಯಾಗಲು ನಾನು ಒಪ್ಪಿಬಂದೆನು. ಈ ನನ್ನ ಮಿತ್ರನನ್ನು ಬದುಕಿಸಿಕೊಡುವುದಾಗಿದ್ದರೆ ನಿನ್ನೊಡನೆ ಸುಖದಿಂದಿರುವೆನು. ಹಾಗಿಲ್ಲವಿದ್ದರೆ ಈಗಲೇ ಗಂಗಾತೀರಕ್ಕೆ ಹೋಗುವೆನು.

ಶುಭಾಂಗಿ. ಪುನಃ ದಯಮಾಡಿಸುವುದಾವಾಗ ?

ವಸಂತಮಿತ್ರ. ನೀನು ಪುರುಷರೂಪವನ್ನು ಹೊಂದಿದಾಗ.

ಶುಭಾಂಗಿ. (ಸ್ವಗತಃ) ಈಗ ಏನುಮಾಡಲಿ ! ವರದಿಂದ ಲಭಿಸಿದ ನನ್ನಪತಿಯು ದೇಶಾಂತರಕ್ಕೆ ಹೋಗುವನಂತೆ. ಈತನ ಸಂತೋಷಾರ್ಥವಾಗಿ ಈ ಸ್ನೇಹಿತನನ್ನು ಕಾಪಾಡೋಣವೆಂದರೆ, ದುರ್ಮರಣವಾದವನೆಂದು ಹೇಳಿದುದರಿಂದ ಇವನನ್ನು ಎಬ್ಬಿಸಲು ಮನಸ್ಸುಬಾರದು. ಉಭಯ ಸಂಕಟವಾಗಿದೆ. (ಪ್ರಕಾಶ) ಪ್ರಿಯನೆ, ಈ ನೀಚನ ಯೋಚನೆಯನ್ನೇ ಬಿಡು. ನೀನು ಮಾಡಿದ ಸಾಹಸವೂ, ಉಪಕಾರವೂ ಸತ್ಪುರಷರಿಗೆ ಮಾಡಿದುದೇ ಆದರೆ ಲೋಕದಲ್ಲಿ ಖ್ಯಾತಿಯೂ, ಪರಲೋಕರಾಧನೆಯೂ ಉಂಟಾಗುವುದರಲ್ಲಿ ಯಾವ ಸಂಶಯವೂ ಇರುವುದಿಲ್ಲ.

ವಸಂ: ಮಿತ್ರ. ನೀನು ಹೇಳುವುದು ಸಮ್ಮತವೇ ಸರಿ. ಆದರೆ ಮಿತ್ರನೆಂದು ಭಾವಿಸಿದುದಕ್ಕೆ ಆತನು ನನಗೆ ಎಷ್ಟುತೊಂದರೆಯನ್ನುಂಟುಮಾಡಿದಾಗ್ಯೂ ಅವುಗಳನ್ನು ಲಕ್ಷ್ಯಕ್ಕೆ ತರಲಾರೆನು. ಸತ್ಪುರುಷರು ತಮ್ಮ ಹಠವನ್ನು ಎಂದಿಗೂ ಪೂರೈಸದೆ ಬಿಡುವುದಿಲ್ಲವೆಂದು ತಿಳಿ.

ಶುಭಾಂಗಿ. * ಹಾಗಾದರೆ ಕಾಳಿಯ ವರದಿಂದ ಈತನನ್ನು ಎಬ್ಬಿಸುವೆನು.

ಕಂದ॥ ಸಾರಸಭವಮುಖ್ಯಾಮರ
ವಾರಸುಸೇವಿತಪದಾಬ್ಜೆಮಂಗಳರೂಪೇ ॥
ಸಾರದಯಾನ್ವಿತೆಲೋಕಾ
ಧಾರೆಯೆಅನುರೂಪವರನೀಯೆನಗೀಗಳ್ ॥೫೨॥

(ಹಸ್ತಸ್ಪರ್ಶಮಾಡಿ ಇಬ್ಬರೂ ಮರೆಯಾಗಿ ನಿಲ್ಲುವರು.)

ಸೌಗಂಧಿಕ (ಎಚ್ಚತ್ತು ವಿಸ್ಮಯದಿಂದ ಎಲ್ಲಾ ಕಡೆಯುಲ್ಲಿಯೂ ನೋಡಿ) ಇದೇನು ! ಸತ್ತಿದ್ದವನು ಬದುಕಿದವನಂತೆ ಮನಸ್ಸಿಗೆ ಹೊಳೆಯುವುದು ! ನಾನು ಮಲಗಿಕ್ಕೊಂಡಿದ್ದ ಸ್ಥಳವೂ ಇದಲ್ಲ. ನಾನು ಇಲ್ಲಿಗೆ ಬಂದರೀತಿಹೇಗೆ ! ಬಹಳ ವಿಸ್ಮಯವಾಗಿರುವದಲ್ಲ. ನನಗೆ ಸಂಭವಿಸಿದ ಹಿಂದಿನ ಕಾರ್ಯಗಳೆಲ್ಲಾ ಜ್ಞಾಪಕಕ್ಕೆ ಬರುತ್ತಿರುವುದಕೇನು ಕಾರಣ ! ನನ್ನ ಹೆಂಡತಿಯು ನನ್ನನ್ನು ಕೊಂದು ಹಾಕಿದುದು ನಿಜ. ಈಗ ನಾನು ಈಗ ಬದುಕಿದ್ದರೀತಿಯು ಹೇಗೆ ? ಎಷ್ಟು ಯೋಚಿಸಿದರೂ ಏನೂ ತೋರುವುದಿಲ್ಲವಲ್ಲ. ‡

---

* ರಾಗ, ತೋಡಿ ತಾಳ, ರೂಪಕ.

ಪರಿಪಾಲೆಸೆನ್ನಗೌರಿಯೆ ' ಗಿರಿಜಾತೆಯೆ ಸುವಿನೀತೆಯೆ ॥ಪ॥ ಬಾಲಶಶಿಪಾಲೆನುತ । ಶೀಲೆಕರುಣಾಲವಾಲೆ ॥ ಲೋಲಾಂಬಕಿ । ಬಾಲೆಯನು । ಲೀಲೆಯಿನೆವಿಲೋಕಿಸಿ ॥೧॥ ಗೌರೀಕೃಪಾಪೂರೆಭವ। ದೂರೆಪದ । ತೋರೆಭವ ॥ ನೀರೆಸುಖ । ಜೀರೆಗುಣಹಾರೆಗಭೀರೆ ॥೨॥ ಮಂದಮತಿ । ಯಿಂದೆನಿನ್ನ । ವಂದಿಸದೆ ಮಂದಳಾದೆ ॥ ವಂದಿಸುವೆ । ಇಂದೆನ್ನಯ । ದಂದುಗವ । ನಂದಿಪುದು ॥೩॥

‡ ರಾಗ. ತಾಳ.

ಎತ್ತಲೀಗನೋಡೆಭ್ರಾಂತಿಪುಟ್ಟುತಿರ್ಪುದು । ಮತ್ತೆನೋಡೆಭೀತಿಯಾಂತು । ಒತ್ತುತಚಿತ್ತವೃತತ್ತರಗೊಳಿಪುದು ॥ ಅ ॥ ದಾರಿಯಾವದೋ । ತೊರದೀಗ । ಅರುಕಂಡರೆ । ಏನಗೈವರೊ ॥ ನಾರಿಶ್ಚೆಯಾಗಾರದಂತೆ । ತೋರುವೀತಾಣವು ।ಪರಿಕಿಸಿನೋಡಲು ॥೧॥ ಭಾವಕಿಯುತಾ । ಸಾವುಕೋರ್ದಿರೆ । ಆವರೀತಿಯಿಂ । ಜೀವವಪೊಂದಿದೆ ॥ ಕಾವನ್ನೆಯನಕೃಪೆಯಿಂದುಳದ । ಭಾವವುಭಾವದಿಭಾವಿಸೆತೋರದುತವಕದಿ ॥೨॥

ವಸಂತಮಿತ್ರ. ಪ್ರಿಯೆ, ಈಗ ಒಂದು ಯುಕ್ತಿಯನ್ನು ಮಾಡು. ನೀನು ಹೋಗಿ ಇವನ ಎದುರಿನಲ್ಲಿ ನಿಲ್ಲು. ಏನು ಮಾಡುವನೋ ನೊಡೋಣ.

ಶುಭಾಂಗಿ (ಹತ್ತಿರಕ್ಕೆಹೋಗಿ) ಅಯ್ಯ, ನೀನಾರು. ಇಲ್ಲಿಗೆ ಏಕೆ ಬಂದೆ ? ಸ್ತ್ರೀಯರ ಅಂತಃಪುರಕ್ಕೆ ಬರಲು ಕಾರಣವಿಲ್ಲವಲ್ಲ.

ಸೌಗಂಧಿಕ. ಅಮ್ಮ, ಸತ್ತಿದ್ದವನು ಬದುಕಿದಂತಾಗಿರುವುದು. ನಾನು ಇಲ್ಲಿಗೆ ಹೇಗೆ ಬಂದೆನೊ ಅದೇ ತಿಳಿಯದು ; ಕೋಪಿಸಿಕೊಳ್ಳ ಬೇಡ. ನನ್ನ ಮಾತನ್ನು ಲಾಲಿಸು.

ಶುಭಾಂಗಿ. ಸುಂದರನೆ, ನೀನು ಸತ್ತದ್ದು ನಿಜ. ಈಗ ನೀನು ಬದುಕಿರುವುದೂ ನಿಜ. ನಿನ್ನಂತಹ ಅವಿವೇಕಿಯನ್ನು ಪ್ರಪಂಚದ ಲ್ಲೆಲ್ಲೂ ಕಾಣೆ. ಒಳ್ಳೇದು ನೀನುಯಾರು ?

ಸೌಗಂಧಿಕ ತಾಯೆ, ನಾನು ವಸಂತಮಿತ್ರನ ಸ್ನೇಹಿತ. ಅವನು ನನ್ನನ್ನು ಪ್ರಾಣವೆಂದು ಕಾಪಾಡಿಕೊಂಡು ಬರುತ್ತಿದ್ದನು.

ಶುಭಾಂಗಿ. ನಿನ್ನ ಮದುವೆಯಾದ ಹೆಂಡತಿಯೇ ನಿನ್ನನ್ನು ಕೊಂದು ಹಾಕಿದಳು. ಹೇಗೆ ಜೀವವಿಂದ ಬದುಕಿದೆಯೋ ನನಗೆ ತಿಳಿಯದು. ನನ್ನ ಪತಿಯಾದ ವಸಂತಮಿತ್ರನು ಬರುವ ಹೊತ್ತಾಯಿತು. ಬೇಗ ಹೊರಕ್ಕೆ ಹೋಗು

ಸೌಗಂಧಿಕ. ಏನು, ಏನು, ನೀನು ವಸಂತಮಿತ್ರನ ಹೆಂಡತಿಯೆ ? ನೀನು, ನನ್ನ ಸ್ನೇಹಿತನ ಹೆಂಡತಿಯಾದುದರಿಂದ ಪ್ರೀತಿಯಿಂದ ವಂದಿಸಿದೆನು. (ನಮಸ್ಕರಿಸಿ) ದಯವಿಟ್ಟು ನನ್ನ ಸ್ನೇಹಿತನನ್ನು ತೋರಿಸಿ ಕೃತಾರ್ಥನನ್ನಾಗಿ ಮಾಡಿದರೆ ಬಹಳ ವಂದಿಸುವೆನು.

ಶುಭಾಂಗಿ. ನಿನ್ನ ಸ್ನೇಹಿತನಿಂದಲೇ ನೀನು ಬದುಕಿದೆ. ನಿನ್ನ ಹೆಣವನ್ನು ಹೊತ್ತುಕೊಂಡು ಬಂದವನೇ ಆತನು. ಆನೀಚಸ್ತ್ರೀಯಿಂದ ಪ್ರಾಣಾಪ್ತನಾದ ನಿನ್ನ ಸ್ನೇಹಿತನನ್ನು ದೇಶಭ್ರಷ್ಟನನ್ನಾಗಿ ಮಾಡಿಸಿದೆಯಲ್ಲ, ನೀನು ಎಂತಹ ನೀಚ ಮಾರ್ಗವನ್ನು ಅವಲಂಬಿಸಿದೆಯೋ ಅದನ್ನು ಯೋಚಿಸು. ನೀನು ಇಷ್ಟುಬುದ್ಧಿವಂತನಾದಾಗ್ಯೂ ಆಸ್ತ್ರೀಯು ಗೋಪ್ಯವಾಗಿ ನಿನ್ನ ಸ್ನೇಹಿತನ ಕಿವಿಯಲ್ಲಿ " ಇದನ್ನು ಯಾರೊಡನೆಯೂ ಹೇಳಬೇಡ " ಎಂಬದ್ವಂದ್ವಾರ್ಥವುಳ್ಳ ಶಬ್ದಗಳನ್ನು ಗೋಪ್ಯ

ವಾಗಿ ನಿನಗೆ ಹೇಳಿದರೆ, ಅದರ ಅರ್ಥವನ್ನು ಪರ್ಯಾಲೋಚಿಸದೆ ಹೀಗೆ ಮಾಡಬಹುದೆ? ಮುಖ್ಯವಾಗಿ ಸ್ತ್ರೀಯರಮಾತೇ ಪ್ರಾಧಾನ್ಯವಾಗಿರುವು ದೆಂದು ನಂಬಬಾರದು. ಹೆಂಗಸರು ಮಹಾತಂತ್ರಗಾರರೇಸರಿ. ಅದ ರಲ್ಲೂ ಜಾರೆಯರೂ, ವೇಶೆಯರೂ ತಮ್ಮ ತಮ್ಮ ಪ್ರಯೋಜನಕ್ಕೆ ಎಂತಹ ಮಿತ್ರರನ್ನಾದರೂ ಅಗಲಿಸಿ, ಪ್ರಾಣವನ್ನು ತೆಗೆಸುವರೆಂದು ನೀನು ಬಲ್ಲೆ.

ಸೌಗಂಧಿಕ. ತಾಯೆ, ನಿನ್ನ ಮಾತು ಸತ್ಯ. ನನ್ನ ಸ್ನೇಹಿತನ ಮುಖ ವನ್ನು ನೋಡಿ, ಪ್ರಾಣವನ್ನು ಕಳೆದು ಕೊಳ್ಳುವೆನು ಇಷ್ಟುಮಾಡು.

ಶುಭಾಂಗಿ. ಹೇಡಿಗಳು ಕಷ್ಟ ಅವಮಾನಗಳನ್ನು ಸಹಿಸದೆ ಪ್ರಾಣ ಬಿಡುವರು. ನೀನು ಬಿಡುವೆಯಾ? ಹಾಗಾದರೆ ನಿನಗೂ, ಪಶುಗಳಿಗೂ ವ್ಯತ್ಯಾಸವೇನು? ಇದು ಧರ್ಮವಲ್ಲ. ಮನುಷ್ಯನು ತನಗೆ ಪ್ರಾಪ್ತವಾ ಗುವ ಕಷ್ಟಗಳನ್ನೆಲ್ಲಾ ತಾಳ್ಮೆಗುಣದಿಂದ ಸಮಯುಮರಿತು ನಡೆದು ಪರಿಹಾರ ಮಾಡಿಕೊಂಡು, ಜನೋಪಕಾರಿಯೆನಿಸಿ, ಮೋಕ್ಷವನ್ನು ಹೊಂದಲು ತಕ್ಕ ಪ್ರಯತ್ನವನ್ನುಮಾಡು. ಅಲ್ಲದೆ

ವೃತ್ತಂ।

ವರಪೂರ್ವಾಚಾರವಾಂತು ಧೃತಪಥದೊಳ್ ಸಂಚಾರನುಂಗೆಯ್ಯದೆಹೇಯಾ।
ಕರಮಾಪಾನಿಂದೆ ಗೀಡಾಗದೆ ಸುಜನತೆಯೊಳ್ ಸ್ಯಪೊಳ್ ಚಿತ್ತನಿಟ್ಟುಂ॥
ಧರೆಯೊಳ್ ಸತ್ಕೀರ್ತಿಯುಂತಾಳ್ದನುಪಮಗುಣದಿಂ ಪೂರ್ಣನಾಗುತ್ತೆ ನಿಷ್ಠಂ।
ಮೆರೆಯುತ್ತಿರ್ಪಂಗೆಭಾವಿಪ್ಪೊಡೆಧರಣಿಯೆತಾಂಸ್ವರ್ಗಸಾಂಮ್ರಾಜ್ಯಮಕ್ಕುಂ॥

* ಸೌಗಂಧಿಕ. ನನ್ನ ಮಿತ್ರನನ್ನು ತೋರಿಸು. (ವಸಂತಮಿತ್ರನು ಎದುರಿಗೆಬಂದುದನ್ನು ನೋಡಿ) ಮಿತ್ರನೆ, ನಿನಗೆ ನಾನು ಮುಖವನ್ನು ತೋರಿಸಬಹುದೆ?

ವಸಂತಮಿತ್ರ. ಅಂತಹ ತಪ್ಪು ನೀನು ಏನುಮಾಡಿದೆ?

---

* ರಾಗ. ತಾಳ.

ಕ್ಷಮಿಸ್ಸೆ ಅಪರಾಧವ। ಸಖನಿಃಂ॥ಪ॥ ನಾನಾಗನ್ನೆದವ ಮಾನದಕಾರ್ಯಕೆ। ಮಾನ್ಯನೆಮನಿಸು ॥೧॥ ನಿನ್ನಿಂದಸಂತಸ । ವನ್ನುನಾಂಪೊಂದಿದೆ ॥ ಧನ್ಯನುನಾ ನಾದೆನು ॥೨॥

ಸೌಗಂಧಿಕ. ಆನೀಚಸ್ತ್ರಿಯು ನಿನಗೆ ಗುಟ್ಟನಲ್ಲಿ ಹೇಳಿದುದನ್ನೇ ನೀನು ನನಗೆ ಹೇಳಿದರೂ ನಂಬದೆ ನಿನ್ನನ್ನು ರಾಜ್ಯಭ್ರಷ್ಟನನ್ನಾಗಿ ಮಾಡಿಸಿ ಎಷ್ಟು ತೊಂದರೆಯನ್ನುಂಟುಮಾಡಿದಾಗ್ಯೂ ಅದನ್ನು ಮನಸ್ಸಿಗೆ ತಂದುಕೊಳ್ಳದೆ, ನನ್ನ ಶವವನ್ನು ಹೊತ್ತುಕೊಂಡು ಬಂದು ನನಗೆ ಜೀವವನ್ನು ಕೊಟ್ಟು ಕಾಪಾಡಿದೆಯಲ್ಲ. ನಿನ್ನ ಉಪಕಾರಕ್ಕೆ ನಾನು ಏನುಕೊಟ್ಟು ಕೃತಾರ್ಥನಾಗಲಿ. ನನ್ನ ಅಪರಾಧವನ್ನು ಮನಸ್ಸಿನಲ್ಲಿಡದೆ ಕ್ಷಮಿಸಿ ಕಾಪಾಡು. ಈಕೆಯಾರು ?

ವಸಂತಮಿತ್ರ. ನಿನ್ನ ಪ್ರಾಣವನ್ನು ಕಾಪಾಡಲು ನಾನು ಈಕೆಯನ್ನು ಮದುವೆಯಾಗಿರುವೆನು. ಈಕೆಯು ಕಾಳೀವರದಿಂದ ನಿನ್ನನ್ನು ಬದುಕಿಸಿದಳು.

ಸೌಗಂಧಿಕ. ಅಮ್ಮ, ಪ್ರಾಣದಾನಮಾಡಿದ ನೀನೇ ನನ್ನ ಮಾತೆಯು (ಎಂದು ನಮಸ್ಕರಿಸುವನು.)

ಶುಭಾಂಗಿ. ಸೌಗಂಧಿಕನೆ, ಕೇಳು ; ಸ್ನೇಹಿತನು ತನ್ನ ಮಿತ್ರನಿಗೆ ಒಳ್ಳೇದಾಗಲೆಂದು ಸ್ವಲ್ಪಕೆಲಸಕ್ಕೂ ಅಲಕ್ಷ್ಯಮಾಡದೆ ತುಂಬಾಶ್ರಮೆಯನ್ನು ತೆಗೆದುಕೊಳ್ಳುವನು. ಅಂತಹ ಮಿತ್ರನನ್ನು ಅವಿವೇಕದಿಂದ ತಿರಸ್ಕರಿಸಿಬಿಡುವನೆಂಬುವುದಕ್ಕೆ ನೀನೇ ದೃಷ್ಟಾಂತವಾಗಿಧೀಯೆ. ಒಳ್ಳೇಸ್ನೇಹಿತನಿಗೆ ಸಮಾನವಾದ ವಸ್ತುವು ಪ್ರಪಂಚದಲ್ಲೇ ಇಲ್ಲ. ಒಂದುವೇಳೆ ನಮ್ಮ ಗುಣಗಳೂ, ಕಾರ್ಯಗಳೂ ಹೇಯವಾಗಿದ್ದರೂ ಅವುಗಳನ್ನು ಆತನು ತನ್ನ ಮನಸ್ಸಿಗೆ ತಂದುಕೊಳ್ಳದೆ, ನಮಗೆ ಸಕಾಲಗಳಲ್ಲಿ ಬುದ್ಧಿವಾದಗಳನ್ನು ಹೇಳಿ, ಸತ್ಕಾರ್ಯಗಳನ್ನೇ ಮಾಡಿ ತೊಂದರೆಯಿಂದ ಕಾಪಾಡುವನು. ಸ್ನೇಹವೆಂಬ ತೋಟಕ್ಕೆ ರಕ್ಷಣೋಪಾಯವೆಂಬ ಕೃಷಿಯನ್ನೆಸಗಿ, ಪ್ರಯೋಜನಗಳೆಂಬ ಹಣ್ಣುಗಳನ್ನು ಬೆಳೆಯದೆ ಪಾಳುಮಾಡುವುದು ಸರಿಯಲ್ಲ.

*ವಸಂತಮಿತ್ರ. ಸ್ನೇಹಿತನೆ, ಇನ್ನು ನನ್ನ ಹೆಂಡತಿಯೊಡನೆ ನಮ್ಮ ಊರಿಗೆ ಹೋಗೋಣ ಬಾ. (ಎಂದು ಹೊರಡುವರು.)

ವೃತ್ತಂ॥ ಭರತವಾಕ್ಯ.

ಸುರಪಂಸಂಮೋದಮಾನುತ್ತುಚಿತಸಮಯದೊಳ್ವೃಷ್ಟಿಯಂಗೈದುಶೋಭಾ।
ಕರಮಾದೀಧಾತ್ರಿಯಂಸಾರಫಲಗಳತತಿಯಿಂದಾವಗಂತೀವಿಶೋರ್ಷಂ ॥
ತಿರೆಮಾಳ್ಕೀಕೃಷ್ಣರಾಜಂಗನುಪಮನಯದಿಂ ಭೃತ್ಯರಂಮೋದದಿಂದಂ ।
ಭೊರೆಯಲ್ ದೀರ್ಘಾಯುಮಂ ನೀಡುಗೆದಶರಥಪುತ್ರಂಬುಧಸ್ತೋತ್ರಪಾತ್ರಂ॥

---

* ರಾಗ ಶಂಕರಾಭರಣ ನೋಟ್' ಛಾಪು

ನೀರಜನಿಭನಯನ । ಮುರಾರಿಯೆ ॥ಪ॥ ಶ್ರೀಕರಶ್ರೀಶಶುಭಾಕರನೆ ।
ವಾರಿಜಾರಿ । ಸುಂದರಾಸ್ಯಶ್ರೀಪ್ರಮೋದದಾತ ॥ ಭಾವಜವಿರೋಧಿನವನುತ ।
ಕುವಲಯನಯನ ।ಭವಮುದಹನನ ।ಶೂರಧೀರಮಾರತಾತಶ್ರೀಶಪಾಲಿಸೈ ॥೧॥
ಸಾಮಜದೇವಮುಖಾರ್ಚಿತನೆ । ಖ್ಯಾತಪೂತ । ಭೂಮಿಜಾನಿತ್ಯಸಂಪೂಜಿ
ತಾಂಘ್ರಿ । ದೀನರಪಾಲಕಸುಗುಣ । ಶ್ರೀತತತಿಭರಣ । ಶೃತಿನುತಮಹಿಮಾ।
ಪಾಲಿಸೈಯ್ಯ ಕೃಷ್ಣರಾಜಭೂಮಿಪಾಲನಂ ॥

ಚತುರ್ಥಾಂಕ ಸಂಪೂರ್ಣಂ.

# ಶುದ್ಧಾಶುದ್ಧ ಪತ್ರಿಕೆ.

| ಪುಟ. | ಪಙ್ತಿ. | ಅಶುದ್ಧ. | ಶದ್ಧ. |
|---|---|---|---|
| ೨ | ೧ | ಪಾಸಿಗೆವಾರ್ಧಿ | ಪಾಸುಪಯೋಧಿ |
| ,, | ೨೩ | ತೆರನಂ | ತೆರದಿಂ |
| ೩ | ೧೨ | ಪ್ರಸ್ಥಾವನೆ | ಪ್ರಸ್ತಾವನೆ |
| ೪ | ೫ | ರತ್ನಪುರಿ | ರತ್ನಪುರೀ |
| ೫ | ೩ | ಸ್ವಗತಃ | ಸ್ವಗತಂ |
| ,, | ೧೩ | ಮೊದಮದ | ಮೊದಲದ |
| ,, | ೧೪ | ಸ್ಮರಿಸುತ್ತೆ | ಸ್ಮರಿಸುತೆ |
| ೬ | ೨ | ಎಲೌಸಖಿಯುರಿರಾ | ಚಾರುಶೀಲೆ ಎಲೌ ಸಖಿಯುರಿರಾ |
| ,, | ೯ | ನೀರಣುಗನು | ನೀರಣುಗಂ |
| ,, | ೧೦ | ನಾರಿರ್ಪಸಚಿವನೊಡನಾ | ನಾರಿರ್ಪನಮಾಸಚಿವಂ |
| ,, | ೧೧ | ಭೂರಮಣನಿರಲವನೇನ | ಭೂರಮಣಂತಾನದೇನ |
| ,, | ೧೪ | ತಾನುಂ | ತಾನೇಂ |
| ,, | ೧೬ | ಗೊಬ್ಬುಳಿ ಬಳಿಸಾರ್ವುದೇ | ಗೊಬ್ಬುಳಿಯನೆಸಾರ್ವುದೆ |
| ೭ | ೧೯ | ವಿದ್ಯವೂ | ವಿದ್ಯಗಳೂ |
| ೯ | ೧೬ | ಸಹಕಾರಕೆ | ಸಹಕಾರವು |
| ೧೦ | ೯ | ವತಾನಮುಂ | ಮೌನಮುಂ |
| ೧೧ | ೨೦ | ಉತ್ಕೃಷ್ಠ | ಉತ್ಕೃಷ್ಟ |
| ೧೨ | ೩ | ಕಳೆದರೆ | ಕಳೆದು |
| ,, | ೪ | ಸಕ್ತನಾಗಿ | ಸಕ್ತರಾಗಿ |
| ,, | ,, | ಹೀನನಾಗಿ | ಹೀನರಾಗಿ |
| ,, | ,, | ನೆನಸಿ | ರೆನಿಸಿ |
| ,, | ೫ | ನಿಂದಕ | ನಿಂದಿತ |
| ,, | ೧೩ | ವಿಃಷ್ಠ | ವಿಃಷ್ಟ |
| ೧೫ | ೧೩ | ಶರಗನ್ನು | ಪೆರಗನ್ನು |

| ಪುಟ. | ಪಙ್ಕ್ತಿ. | ಅಶುದ್ಧ. | ಶುದ್ಧ. |
|---|---|---|---|
| ೧೬ | ೧೩ | ಕೂಡುವುದು | ಕೂತುಕೊಳ್ಳುವುದು |
| ,, | ೧೪ | ಸ್ಥಿಮಿತದಲ್ಲಿಟ್ಟು | ಸ್ತಿಮಿತವಾಗಿಟ್ಟು |
| ೧೮ | ೪ | ಕಿವಿಗೊಟ್ಟುದುದಕ್ಕೆ | ಕಿವಿಗೊಟ್ಟುದಕ್ಕೆ |
| ,, | ೧೨ | ಉಭಯತ್ರರು | ಉಭಯರೂ |
| ೨೦ | ೧೧ | ಜೌಂವನಂ | ಜಾವ್ವನಂ |
| ೨೩ | ೭ | ಯೋಗ | ವಿಯೋಗ |
| ೨೫ | ೯ | ರಾಜ್ಯ | ಅಧಿಕಾರ |
| ೨೬ | ೨೬ | ನಿವರ್ತ | ನಿವೃತ್ತ |
| ೨೭ | ೧೯ | ರಾಜ್ಯ | ಪದ |
| ,, | ೨೭ | ಅದನ್ನಾದರೂ | ಅದನ್ನೂ |
| ೨೮ | ೬ | ರಾಜ್ಯ | ಪದ |
| ೩೧ | ೫ | ಮನಿಶ | ಮನಿಶಂ |
| ,, | ೧೧ | ಪಡಿಸರು | ಪಡಿಸಲು |
| ,, | ೨ | ತೋದನ | ತೋರ್ಪ |
| ೩೫ | ೧೯ | ಮಿತ್ರನ | ವಸಂತಮಿತ್ರ, ಮಿತ್ರನ |
| ,, | ೨೩ | ಸದಯಾ | ಒದವಿದ |
| ೩೫ | ೨೫ | ವಸಂತಮಿತ್ರ | ... |
| ೩೬ | ೩ | ಅತ್ಯನ್ನತಃ | ಅತ್ಯನ್ನತಿಃ |
| ೩೯ | ೧೦ | ವಿಶ್ವಾಸವಿರುವದೆಂತಲೂ | ವಿಶ್ವಾಸವುಳ್ಳವಳೆಂತಲೂ |
| ೪೦ | ೬ | ಕೋರುವುದೇ | ತೋರುವುದೇ |
| ,, | ೭ | ... | ಈ ಶೈಯಾಗೃಹವಾದರೋ |
| ೪೨ | ೮ | ಇವನು | ಇವಳು |
| ೪೪ | ೧೨ | ಹೇಳುವನೋ | ಹೇಳುವಳೋ |
| ೪೯ | ೩ | ಗೆಯುಜವ | ಗೆಯ್ಯುವ |
| ೫೦ | ೧೨ | ತಿಳಿದ ಅಂಶವಲ್ಲ | ತಿಳಿಯುದ ಅಂಶವಲ್ಲ |
| ೫೧ | ೮ | ಕೇಳದರಷ್ಟೆ | ಕೇಳಿದಿರಷ್ಟೆ |
| ,, | ೨೨ | ಶೈಯಾ | ಶಯ್ಯಾ |
| ,, | ೨೫ | ಹೇಳಿದ | ಹೇಳಿದೆ |
| ,, | ೨೮ | ಕೆಟ್ಟಯೋಚನೆಗಳನ್ನು | ಕೆಟ್ಟದ್ದನ್ನು |

| ಪುಟ. | ಪಙ್ಕ್ತಿ. | ಅಶುದ್ಧ. | ಶುದ್ಧ. |
|---|---|---|---|
| ೫೨ | ೭ | ತ್ರಿಕರ್ಣ | ತ್ರಿಕರಣ |
| ೫೪ | ೨೭ | ಮದ್ದಾನೆಗೆ | ಮದ್ದಾನೆಯನ್ನ |
| ೫೫ | ೧೫ | ಬಂದು | ಬರುವರು. ವಸಂತಮಿತ್ರನು |
| ೫೬ | ೨೭ | ನೀಚರನ್ನು | ನೀಚಳನ್ನು |
| ,, | ೨೩ | ತಡೆಯುವೆನು | ತಡೆಯುವನು |
| ೫೯ | ೧೯ | ಮರೆಮಾಜುವಳಲ್ಲ | ಮರೆಮಾಜುವೆಯಲ್ಲಾ |
| ,, | ೨೫ | ಮೆನಿಸಿತೋಸ್ಕೃ | ಮೆನಿಪ್ಪುದುಸತಿ |
| ೬೨ | ೧೬ | ಪಾತಿಧ್ಯ | ಪಾತಿತ್ಯ |
| ,, | ೨೬ | ರಾಜ್ಯ | ಪದ |
| ೭೪ | ೫ | ನಿನ್ನನ್ನು | ನನ್ನನ್ನು |
| ,, | ೧೪ | ರಿಳೆಯೆ | ರಿಳೆಯೊ |
| ೭೬ | ೧ | ಅವ್ಯವಸ್ಥೆಯೇ | ಅವ್ಯವಸ್ಥೆಗೆ |
| ,, | ೧೬ | ತಿಂದು | ... |
| ,, | ೧೩ | ತಿಂದು | ಬಹಳ |
| ,, | ೨೪ | ಹೆಣಗಳಿಗಿಂತಲೂ | ನಿಮಗಿಂತಲೂ |
| ೭೮ | ೨೭ | ಕೃತ್ರಮ | ಕೃತ್ರಿಮ |
| ೮೨ | ೩೧ | ಹಸುಕೊಡುವ | ಹಸುಗಳ |
| ೮೮ | ೧೦ | ನಿನ್ನ | ನನ್ನ |
| ,, | ೧೭ | ವಿಚಕ್ಷಣೆ | ವಚಕ್ಷಣತೆ |
| ,, | ೨೨ | ನೀನಿಟ್ಟಿರುವ | ಇಟ್ಟಿರುವ |
| ೮೯ | ೨೧ | ರಾಧನೆಯೂ | ಸಾಧನೆಯೂ |
| ೯೦ | ೬ | ವರನೀ | ವರವನೀ |
| ೯೧ | ೨೬ | ಗೋಪ್ಯವಾಗಿ | ... |
| ೯೨ | ೪ | ವೇಶಿ | ವೇಶ್ಯೆ |
| ,, | ೧೨ | ನಡೆದು | ತಡೆದು |
| ,, | ೧೬ | ಚಾರವಾಂತುಗೆಯ್ಯದೆ | ಚಾರವಿಟ್ಟುಗೆಯ್ದು |
| ,, | ೧೭ | ಚಿತ್ತವಿಟ್ಟಂ | ಚಿತ್ತವಿಟ್ಟೇ |

# NOTICE.

—o—

ಈ ಗ್ರಂಥಕರ್ತರಿಂದ ರಚಿಸಲ್ಪಟ್ಟಿರುವ ಪುಸ್ತಕಗಳು

| | | | |
|---|---|---|---|
| 1 | ಗೀತಮಂದಾರ, ೨ ನೇಯ ಛಾಪೆ. | ... | 0—2—0 |
| 2 | ಕ್ರಿಸ್ಟೋಫರ್ ಕೊಲಂಬನ ಚರಿತ್ರೆ. | ... | 0—1—0 |
| 3 | ನೆಪೋಲಿಯನ್ ಬೊನೆಪಾರ್ಟು ಮತ್ತು ಸೋಕ್ರೆಟೀಸ್, ಇವರುಗಳ ಚರಿತ್ರೆ. | ... | 0—3—0 |
| 4 | ರಾಜಕಥಾವಲ್ಲರಿ. | .. | 0—8—0 |
| 5 | ಹೈದರಾಲಿಯ ಚರಿತ್ರೆ. | ... | 0—1—0 |
| 6 | ಮನೋರಂಜನಿ ನಾಟಕ (As you like it) ಪ್ರಿಂಟಿನಲ್ಲಿದೆ. | | |

☞ ಮೇಲ್ಕಂಡ ಪುಸ್ತಕಗಳು ಮೈಸೂರು ವದೆಗನ್ನಡಿ ಆಫೀಸ್, ಮೈಸೂರು ಮಿರ್ಜ್ ಬುಕ್‌ಡಿಪೋ, ಮೈಸೂರು, ಬಿ. ಜನರಲ್ ಏಜಂಸಿ ಮತ್ತು ಗ್ರಂಥಕರ್ತರಲ್ಲಿಯೂ ದೊರೆಯುವುವು. ಟಾಂಗೀಛಾರ್ಜನ್ನು ಅಲಾಯಿದಾ ಕೊಡಬೇಕು.

ಆನವಟ್ಟಿ ರಾಮರಾವ್,
ಹಳೇಅಗ್ರಹಾರ,
ಮೈಸೂರು.

28-2-1906
ಮೈಸೂರು.